ಅ ರ್ಪ ಣ

ತ್ರಿಶೂಲಿಗಳನ್ನು ತಾಳುವ
ತಾಖತ್ ಉಳ್ಳವರಿಗೆ

# ಸಂಪಾದಕೀಯ ಸಾವು

ರಾಯರ ಮಗಳಿಗೆ ಮದುವೆ ವಯಸ್ಸು ಬಂದಿತಂತ್ರೆ—ಆ ವಯಸ್ಸು ಯಾವುದು ಎಂಬದು ಮಾತ್ರ ಮಗಳಿಗೂ ಗೊತ್ತಿಲ್ಲ. ರಾಯರಿಗಂತೂ ಮೊದಲೇ ಗೊತ್ತಿಲ್ಲ—ಮನೆಯಲ್ಲಿ ಹೆಂಡತಿ ಛೀ ಮಾಡಿದಳು; ಊರಲ್ಲಿ ಅವರಿವರು ಥೂ ಹಾಕಿದರು; ಇನ್ನು ಸರಿಯಲ್ಲವೆಂದು ನಿದ್ರೆಯಿಂದೆದ್ದು ಸೋಮಾರಿ ಬೆಕ್ಕಿನಂತೆ ಬಾಯಿ ಕಿಸಿದು 'ಆ'ಕಳಿಸಿ, ಬಾಯಿಯ ಮುಂದೆ ಬೆರಳಿನಿಂದ ಚಿಟಿಕೆ ಹೊಡೆಯುತ್ತ ರಾಯರು ಹೊರಟರಂತೆ ತಿಂಮಾಭಿ ಮುಖವಾಗಿ. ಹುಡುಕುತ್ತಿದ್ದ ಕತ್ತೆಯು ಕಾಲು ಝಾಡಿಸಿದಂತೆ ನಡುರಸ್ತೆಯಲ್ಲಿಯೇ ತಿಂಮ ಹಿಂದೆಬಂದು ಸಾಕ್ಷಾತ್ಕರಿಸಿ ಬೆನ್ನಿಗೊಂದು ಬಲವಾಗಿ ಕೊಟ್ಟು ನಮಸ್ತೆಸಿದನಂತೆ. ರಾಯರಿಗಾಗ ಅಪಾರ ಆನಂದವಾಯಿತಂತೆ; ತಮ್ಮ ದುಃಖವನ್ನು ತೋಡಿಕೊಂಡರಂತೆ ತಿಂಮನ ಮುಂದೆ. 'ಓಹೋ! ಆಗಲಿ. ಅಗತ್ಯವಾಗಿ ತರುತ್ತೇನೆ ವರನನ್ನು ತಮ್ಮ ಮಗಳಿಗೆ' ಎಂದು ಹೊರಟನಂತೆ ತಿಂಮ. 'ಇಪ್ಪತ್ತೈದು ವರ್ಷದವನಿರಲಿ' ಎಂದು ಸೂಚಿಸಿ ರಾಯರು ಮನೆಗೆ ಮರಳಿದರಂತೆ, ಮನಸ್ಸಿಗೆ ಕೊಂಚ ನೆಮ್ಮದಿ ಮಾಡಿಕೊಂಡು. ಒಂದು ಮಧ್ಯಾಹ್ನ ಇದ್ದಕ್ಕಿದ್ದಂತೆ ತಿಂಮ ಅವಸರವಸರದಿಂದ ಧಾವಿಸಿದನಂತೆ ರಾಯರ ಮನೆಗೆ. "ಮರತೇ ಬಿಟ್ಟೆ ಏನೋ ತಿಂಮಾ........." ಇನ್ನು ಏನೇನನ್ನೂ ರಾಯರು ಅನ್ನುವಮೊದಲೇ "ರೆಡೀ" ಎಂದವನೇ ಹೊರ ನಿಂತಿದ್ದ ಟಾಂಗಾದ ಬಳಿ ಓಡಿ ತಂದೇ ಬಿಟ್ಟನಂತೆ. ಏನನ್ನು? ಮೂರು ಮೂರು ವರ್ಷಗಳ ನಾಲ್ಕು ಕೂಸುಗಳನ್ನು, ಆರಾರು ವರ್ಷಗಳ ಎರಡು ಹುಡುಗರನ್ನು! ಈ ಐದನ್ನು ತಂದು ಮುಂದಿಕ್ಕಿ "ಸಧ್ಯಕ್ಕೆ ಇವನ್ನು ಮದುವೆಯಾಗಲಿ ನಿಮ್ಮ ಮಗಳು. ಬಾಕಿ ಆಗುವ ಒಂದು ವರ್ಷದ ಇನ್ನೊಂದು ಮಗುವನ್ನು ನಾಲ್ಕಾರು ತಿಂಗಳುಗಳಲ್ಲಿಯೇ ತರುತ್ತೇನೆ" ಎಂದು ಸಮಾಧಾನ ಹೇಳಿದನಂತೆ ಆ ವ್ಯವಹಾರ ನಿಪುಣ ತಿಮ್ಮ. ಹೀಗೆಯೇ ಆಗಿದೆ ನಮ್ಮ ಮಾಲೆಯ ಕೆಲಸ. ಕಳೆದ ವರ್ಷದ ನೊವೆಂಬರದಲ್ಲಿ ಆಗ

ಬೇಕಿದ್ದ ' ಹನ್ನೊಂದನೆ ಅವತಾರ'ವು ಅವಸರದಿಂದ ಅಕ್ಟೋಬರದಲ್ಲಿಯೇ ಆಯಿತು. ಏನೋ ಆಯಿತು ಬಿಡು ಎಂದು ಚಂದಾದಾರ ವೃಂದವು ಕ್ಷಮಿಸಿತು, ಎಂದಿಟ್ಟುಕೊಳ್ಳಿ. ಕರಾರಿನ ಮೇರೆಗೆ ಈ ವರ್ಷದ ಮಾರ್ಚಿಯಲ್ಲೊಂದು ಜುಲೈಯಲ್ಲೊಂದು ಎರಡು ಮುತ್ತುಗಳು ಹೊರಬೀಳಬೇಕಿತ್ತು ನಮ್ಮ ಮಾಲೆಯಿಂದ. ಆಗಷ್ಟು ದಾಟಿದರೂ ಆ ವಾಸನೆಯೇ ಇಲ್ಲ! ಸಪ್ಟೆಂಬರದಲ್ಲಿ ಇದ್ದಕಿದ್ದಂತೆ ಎರಡೂ ಮುತ್ತುಗಳು ಹೊರತೇಲಿ ಬಂದವು ತಿಂಮ ಮಹಾಸಾಗರದಿಂದ. ಈ ಅಕ್ಷಮ್ಯ ವಿಳಂಬಕ್ಕೆ ವಾಚಕಮಹಾಶಯರ ಮನ್ನಣೆ ಬೇಡೋಣವೆ? ಬೇಡಿದ ಕೂಡಲೆ ಮನ್ನಿಸಿಬಿಡಲು ಅವರೇನು ಕಾಲಾಣೆಯ ಹೂಕಾಯಿಗಾಗಿ ಕಾಡುವ ಹರುಕು ಮುರುಕು ದೇವರುಗಳೇ? ಸಹಸ್ರಾರು ತಪ್ಪುಗಳನ್ನು ನಿತ್ಯವೂ ತಪ್ಪದೆ ಮಾಡಿ ಕ್ಷಮಾಯಾಚನೆ ಮಾಡಿದರೆ ಪಾಪ ಪರಿಹಾರವಾಯಿತೆಂದು ತಿಳಿಯುವದು ಕಳ್ಳನ ರೀತಿ; ತಪ್ಪನ್ನು ಒಪ್ಪಿಕೊಂಡು ತಲೆ ಬಾಗದೆ ನಿಂತು " ಎಲೈ, ನ್ಯಾಯಪ್ರಿಯನಾದ ದೇವನೇ! ನನ್ನ ಅಪರಾಧಕ್ಕಾಗಿ ನನ್ನನ್ನು ಇದೊಂದು ಬಾರಿ ದಯವಿಟ್ಟು ಕ್ಷಮಿಸಿ ಬಿಡಬೇಡ ಶಿಕ್ಷಿಸು " ಎನ್ನುವದು ತಿಂಮನ ನೀತಿ.

" ಏಕೋ? ತಡವಾಯಿತು ?" ಎಂದು ಮಾಸ್ತರರು ಗದರಿಸಿ ಕೇಳಿದಾಗ "ಇಲ್ಲ ಸಾರ್, ಕೊಂಚ ಹೊತ್ತಾಯಿತು. ಅದಕ್ಕೆ ಲೇಟ್ ಆಯಿತು." ಎಂದು ವಿದ್ಯಾರ್ಥಿಯು ಸಂಝಾಯಿಷಿ ಕೊಟ್ಟರೆ ಏನು ಪ್ರಯೋಜನ? ವಿಳಂಬದಿಂದಲೇ ಬೇಸತ್ತಿದ್ದ ಓದುಗರನ್ನು ವಿಳಂಬಕ್ಕೆ ಇದ್ದಿರಬಹುದಾದ ಕಾರಣಗಳ ಯಾದಿಯಿಂದ ಇನ್ನೂ ಹೆಚ್ಚು ಬೆಸರಗೊಳಿಸುವದು ಯಾವ ಧರ್ಮ? ಅನೇಕ ನಿಜವಾದ ಕಾರಣಗಳನ್ನೇ ಹೇಳಿಯೂ ನಂಬುವಂತೆ ಮಾಡಬಹುದು ಒಂದೊಂದು ಬಾರಿ. ಆದರೆ? ದೇವರು ದಯಪಾಲಿಸಿದ ಕಾಮಧೇನುವಿನಂತಹ ಸುಳ್ಳು ಇರುವಾಗ ಸತ್ಯವನ್ನಾಡಿ ಸಾಯಬೇಕೇಕೆ? ಎಂಬದೂ ಹಲವರ ವಾದ. ಕಾರಣಗಳಿಗೇನು ಸ್ವಾಮಿ ಕೊರತೆ? ಅವಿವಾಹಿತ ಸಂಪಾದಕನ ಅರ್ಧಾಂಗಿಯ ಅನಾರೋಗ್ಯವನ್ನೋ, ಬಳ್ಳಾರಿಯಲ್ಲಿ ಅತಿ ಮಳೆಯಾಗಿ ಊರು ಮುಳುಗಿದ್ದನ್ನೋ ಧಾರವಾಡದಲ್ಲಿ ಸಾಹಿತಿಗಳ ಕೊರತೆಯಾದುದನ್ನೋ, ಮೈಸೂರಿನಲ್ಲಿ ಸಿಹಿ ಮಾತನಾಡುವವರೇ ಇಲ್ಲವೆಂಬುದನ್ನೋ- ಯಾವುದೋ ಇಂತಹದೊಂದನ್ನು ಹೇಳಿ ಪಾರಾದರೆ ಬರುವದಾದರೂ ಏನು?

" ಏಕೋ ತಿಂಮಾ, ಸಮಯಕ್ಕೆ ಸರಿಯಾಗಿ ಬರಲಿಲ್ಲ ?" ಎಂದು ಕೇಳಿದರೆ ತುಂಟ ತಿಂಮ ಹೇಳಿದನಂತೆ—ಅವನು ಹೇಳಿದುದು ನಮಗೆಷ್ಟೂ ಸರಿ ಬರಲಿಲ್ಲ ಅನ್ನಿ.

" ಬೇರೇನೂ ಕೆಲಸವಿಲ್ಲದವನು ಸಮಯಕ್ಕೆ ಸರಿಯಾಗಿಯೇ ಬರುತ್ತಾನೆ. ಸಮಯಕ್ಕೆ ಸರಿಯಾಗಿ ಬರುವದೊಂದೇ ಸರಿಯಲ್ಲ, ಸ್ವಾಮೀ. ಸರಿಯಾಗಿಯೂ ಬರಬೇಡವೆ ?" ಈ ಉದ್ಧಟತನದೊಂದಿಗೆ ತಿಂಮನ ಇನ್ನೊಂದು ಮಾತನ್ನೂ ಹೇಳಬಯಸುತ್ತೇನೆ. ಅವನಿಗೆ ಅನ್ಯಾಯವಾಗ ಬಾರದೆಂದು. 'ತಿಂಮನ ತಲೆ'ಗೆ ಮೆಚ್ಚಿ ಮದರಾಸ ಸರಕಾರವು ರೂ. ೫೦೦ ಬಹುಮಾನ ಕೊಟ್ಟಿತಷ್ಟೆ ? ಆಗ ಒಬ್ಬರು ಸನ್ಮಾನ ಶಾಸ್ತ್ರ ಮಾಡುತ್ತ ತಿಂಮನನ್ನು ಹೊಗಳಿದರಂತೆ " ತಿಮ್ಮನ ಪಾಂಡಿತ್ಯ ಪರಿಪೂರ್ಣವಿದೆ, ಅದರೊಂದಿಗೆ ಗುಣವೂ ಇದೆ. ತಿಂಮನ ತಲೆ ತಿರುಗುವದಿಲ್ಲ, ತುಂಬಿದ ಕೊಡ ತುಳುಕುವದಿಲ್ಲ.... .... " ನಮ್ರತೆಯಿಂದ ಉತ್ತರಿಸಿದನಂತೆ ಆಗ ತಿಂಮ " ಮಹಾಸ್ವಾಮೀ, ತುಂಬಿದ ಕೊಡ ತುಳುಕುವದಿಲ್ಲ ನಿಜ— ಆದರೆ ಬರೀ ಕೊಡವೂ ತುಳುಕುವದಿಲ್ಲ " ಅಂತೂ ಇಷ್ಟೆ, ಹೇಗೆ ಹೇಗೋ ಇದೆ ತಿಂಮನ ಹಾದಿ. ಆದರೆ ಸಂಪಾದಿಕೀಯ ಹೊಣೆ ಹೊತ್ತ ನಮ್ಮ ಗತಿ?

ಇನ್ನು ಈ ಗ್ರಂಥದ ಬಗ್ಗೆ ಏನು ಸ್ವಾಮೀ ಹೇಳೋಣ ? ಏನೂ ಹೇಳದೆ ಸುಮ್ಮನಿದ್ದರೂ ಹೆಚ್ಚು ಹೇಳಿದಂತೆಯೇ ಆಗಬಹುದೇನೋ ಎನ್ನುವ ಭಯ ನಮಗೆ. ಮುವ್ವರು ಮಹನೀಯರು ಮಾಡಿದ ಮಹೋಪಕಾರದ ಫಲವೇ ಈ ಕೃತಿ. ತಿಂಮನಿಗೆ ಏಕೀಕರಣದ ಮೋಹವು ಇನ್ನೂ ತಪ್ಪಿಲ್ಲವೆಂಬುದಕ್ಕೆ ಬೇರಾವ ಪುರಾವೆ ಬೇಕು? ಮೈಸೂರಿನ ಜಿ.ಪಿ.ಸುಬ್ಬರಾಯರು ಬಿ. ಎ. (ಬ್ಯಾಚಿಲರ್–ಆಫ್-ಆರ್ಟ್ಸ್) ಮೈಶೂಲಿ ಕೊಟ್ಟಿದ್ದಾರೆ, ಧಾರವಾಡದ ಎನ್ಕೆಯವರು, ಎಂ. ಎ. (ಮಾಸ್ಟರ್–ಆಫ್-ಆರ್ಟ್ಸ್ ) ಎದೆಶೂಲಿ ಇತ್ತಿದ್ದಾರೆ. ಬಳ್ಳಾರಿ ಬೀಚಿ, ಎಫ್. ಟಿ. ಸಿ. ಬಿ. ಎಂ ( ಫಾದರ್ ಆಫ್ ಟು ಚಿಲ್ಡ್ರನ್, ಬೋಥ್ ಮೇಲ್ಸ್ ) ತಲೆಶೂಲಿ ತಂದಿದ್ದಾರೆ; ತಿಂಮನ ಇಚ್ಛೆಯ ಮೇರೆಗೆ. ಈ ಶೂಲಿಗಳ ಹೊತ್ತಿಗೆಯನ್ನು ವಾಚಕರ ಕೈಯಲ್ಲಿಕ್ಕಿ ಸದ್ಯ ನಾವು ದೂರಾಗುತ್ತೇವೆ. ಕೊಂಚ ನಿಲ್ಲಿ ' ಗಾಳಿ ಮಾತು ' ಕೂಡಾ ಬಂದೇ ಬಿಟ್ಟಿತು.

ಬಳ್ಳಾರಿ
೧–೯–೫೨

ಸದ್ಯ ಬದುಕಿದ
**ಸಂಪಾದಕ**

# ಶೂಲಿಗಳು ಇಲ್ಲಿವೆ

# ‘ಐ’ಯ್ಯೋ!

ಐಮಾನ್‌ರವರು ಕ್ರಿ. ಶ. ಒಂದು ಸಾವಿರದೊಂಭೈನೂರೊಂದರಲ್ಲಿ ಮನುಷ್ಯಜಾತಿಯಲ್ಲಿ ಕೂಸಾಗಿ ಜನಿಸಿದರು. ಅಂದಮೇಲೆ ಎಲ್ಲ ಮಕ್ಕಳಂತೆ ಅತ್ತರು. ಬತ್ತಿ ಹಾಲನ್ನು ಚೀಪಿ ಅಮ್ಮನ ಹಾಲನ್ನು ಹೀರಿ ‘ ಮಗು ’ ವಾದರು. ನಂತರ ತಾಯಿಯ ಹಾಲನ್ನು ವರ್ಜಿಸಿ ಗೋವಿನಹಾಲನ್ನು ಕುಡಿದು....ಬದುಕಿದರು! ಕಂಡಕಂಡವರೆಲ್ಲ, ಮಗುವನ್ನು ಎತ್ತಿ, ಮುತ್ತಿಟ್ಟವರೆಲ್ಲ ಕೈಗೆ ದುಡ್ಡಿಟ್ಟರು. ಆ ದುಡ್ಡಿನಲ್ಲೀ ಒಂದು ಜತೆ ಕಾಲಂದಿಗೆ ಮಾಡಿಸಿಕೊಂಡು ಹಾಕಿಕೊಂಡರು; ಕಿವಿಗೆ ‘ ತೊಟ್ಟು ’ ನ್ನಿಟ್ಟುಕೊಂಡರು. ಶೀತವಾದಾಗ ಅಳಲೆಕಾಯಿ ಪಟ್ಟನ್ನು ಹಣೆಗೆ ಹಚ್ಚಿಕೊಳ್ಳಬೇಕಾಯಿತು. ಮತ್ತೊಮ್ಮೆ ತಲೆನೋವು ಜಾಸ್ತಿಯಾಗಿ ಮೈ ಬೆಚ್ಚಗಾಗಿ ಬಿಸಿಯಾದಾಗ ‘ಚಿಟಿಕೆ’ ಹಾಕಿಸಿಕೊಂಡರು. ಆ ಗುರುತು ಹಣೆಯಮೇಲಿರಬಹುದು. ದೃಷ್ಟಿ ಪರಿಹಾರಕ್ಕಾಗಿ ಹಲವಾರು ಕಂತೆ ಹಂಚೀಕಡ್ಡಿಯನ್ನು ಹೊತ್ತಿಸಿ ಅದರ ಬೂದಿಯ ಅಂಶವನ್ನು ಹಣೆಗಿಟ್ಟುಕೊಂಡರು. ಹಲವಾರು ಸಾರಿ ಔಷಧಿ ಕುಡಿಯಬೇಕಾಗಿ ಬಂತು. ಮೇಕೆಹಾಲನ್ನು ಒಂದೆರಡು ಬಾರಿ ಕುಡಿದರು. ತುಪ್ಪ ಸಕ್ಕರೆ ಮೆದ್ದರು. ‘ ರಾಜಭೋಗ ’ದಿಂದಲೇ........ರವರಿಗೆ ‘ ಅನ್ನಪ್ರಾಶನ’ವಾಯಿತು........ಸ್ವಲ್ಪ ಖಾಯಿಲೆಯಿಂದ ನರಳಿ ಚೇತರಿಸಿಕೊಂಡು ‘ವಡ್ಡ’ರಾಗಿ ಹಿಟ್ಟಿನ ಬಲದಿಂದ ತೆವಳಲಾರಂಭಿಸಿದರು....ನಂತರ....ಅಂಬೆಗಾಲಿಕ್ಕಿದರು. ಎದ್ದುಬಿದ್ದು ಪುಟ್ಟಾಣಿ ಹೆಜ್ಜೆಯಿಟ್ಟು........ಪ್ರವರ್ಧಮಾನಕ್ಕೇರಿದರು. ‘ಮಾಮ’ ‘ಜೋತ’ ‘ಬೊಬ್ಬ’ ನಿತ್ಯಜೀವನದ ಕಾರ್ಯಗಳಾದವು. ತಂದೆ-ತಾಯಿ, ಸೋದರ ಸೋದರಿಯರನ್ನುಹಲವು ಬಾರಿ ನಗಿಸಿದರು; ಅಳಿಸಿದರು. ಶಿಶುವಿಹಾರಕ್ಕೆ ನುಗ್ಗಿದರು....ಮಕ್ಕಳನ್ನು ಗಿಂಟಿ ಗಿಂಟಿಸಿಕೊಂಡರು, ವಯಸ್ಸಾಯಿತು, ಪ್ರೈಮರಿ ಶಾಲೆಯಲ್ಲಿ....ಮೇಸ್ತ್ರ ಮೇಲೆ ಬಿದ್ದು ಬೈದರು.....ಅಪ್ಪಚ್ಚಿಗಾಗಿ ಅಳುವುದರ ಬದಲು ಗೆಳೆಯರನ್ನೆಲ್ಲಾ ಗೋಳು ಹೊಯ್ದರು. ಹಾಗೂ ಹೀಗೂ....ಮಿಡಲ್‌ಶಾಲೆಗೆ ಬಂದು........

ವಿದ್ಯಾಭ್ಯಾಸ ಸುಖವಿಲ್ಲವೆಂದರು........ವಿಲ್ಸ್‌ಹೊತ್ತಿಸಿದರು, ಪ್ಲೇಯರ್ಸ್ ಪ್ಯಾಕ್ ಕೊಂಡರು. ಅಪ್ಪನ ಜೇಬು, ಅಮ್ಮನ ಸಂದೂಕದೊಳಗಿನ ದುಡ್ಡೆಲ್ಲ ಮಾಯವಾಯಿತು. ಕ್ಯೂನಿಂತು ಸಿನಿಮಾ ನೋಡಿ, ಕ್ಯೂನಿಂತು ಕಾಫಿ ತಿಂಡಿ ತಿಂದರು....ಅಪ್ಪ ಅಮ್ಮ....ಕೊರಳಿಗೆರಡೆಳೆ ಹಾಕಿಬಿಟ್ಟರು, ಸರಿಬಸವನಾದ. ....ಭಾಗ್ಯಲಕ್ಷ್ಮಿ ಒಲಿಯುತ್ತ ಬಂದಳು. ಯುದ್ಧ ಸುರುವಾಯ್ತು....ಮಿಲಿಟರಿ ಸೇರಿದರು....ಅಲ್ಲಿಂದ ಡಿಸ್ಮಿಸ್ ಆದರು. ಊರಿಗೆ ಬಂದರು, ಮಿಲಿಟರಿ ಕಂಟ್ರಾಕ್ಟರ್ ಆದರು, ಬೇಕಾದಹಾಗೆ ಸಂಪಾದನೆ ಮಾಡಿದರು. ತಂದೆ ತಾಯಿಯನ್ನು ಕೇಳಲೇ ಇಲ್ಲ....ಅವರ ಹಳತಕ್ಕೆ ಅವರನ್ನು ಕೈಬಿಟ್ಟರು! ಆಂಗ್ಲೋ ಇಂಡಿಯನ್ನಳೊಬ್ಬಳನ್ನು 'ಲವ್' ಮಾಡಿದರು!....'ಮಜ'ದಿಂದ ಕಾಲ ಕಳೆದರು........ಆಂಗ್ಲೋ ಇಂಡಿಯನ್ನಳು ಬೇರೆಯೊಬ್ಬನನ್ನು ಕಟ್ಟಿಕೊಂಡಳು....ಇವರು....ಒಬ್ಬಳನ್ನು ಮದುವೆಯಾದರು....ಬಿಸಿನೆಸ್ಸು ಡಲ್ಲಾಯಿತು, ಇದುವರೆವಿಗೆ ದಿಲ್ಲಿನಿಂದ ಡ್ಯಾನ್ಸು ಮಾಡುತ್ತಿದ್ದವರು........ಡಂಗು ಬಡಿದು ಕೂತ....ಕಪ್ಪುಮಾರ್ಕೆಟ್ಟಿನಲ್ಲಿ ಅಕ್ಕಿ ಕೊಳ್ಳಲಾಗಲಿಲ್ಲ....ಆಸ್ತಿಪಾಸ್ತಿಗಳನ್ನೆಲ್ಲ ಮಾರಿದರು. ಬಾಡಿಗೆಗೊಂದು ರೂಮು ತೆಗೆದರು....ಮಡದಿ ಗೊಳ್ಳೋ ಎಂದಳು? ಅಕ್ಕಿ-ರಾಗಿ, ಸೌದೆ ಡಿಪ್ಪೋಗಳಲ್ಲಿ,....ಕ್ಲಾತ್‌ಗಾಗಿ ಕ್ಯೂನಿಂತರು....ಪಟ್ಟಣಸಾಲೇ ತಿಂದರು, ಚಕ್ಕಳ ಕಡಿದರು....ಮುಸುಕಿನ ಜೋಳ ನುಂಗಿದರ.....ಸ್ಟ್ಯಾಂಡರ್ಡ್ ಕ್ಲಾತು ಉಟ್ಟರು.....ಅಷ್ಟುಹೊತ್ತಿಗೆ ಬಿಳಿಬಟ್ಟೆ ಬಂತು....ಜೈಲಿಗೆ ಹೋದರು.... ಧೀರ ನಾಯಕನಾಗಿ.... ಖಾದಿ ಧರಿಸಿದರು; ಭಾಷಣಮಾಡಿದರು, ಎಲ್ಲರೂ ಭೇಷ್‌ಅಂದರು....ಸರಕಾರ ಜೈಲಿಗೆ ಹಾಕಿತು.... ಅಲ್ಲಿ ಒದ್ದಾಡಿ....ಇವರ ಕಾಟ ತಡೆಯಲಾರದೆ....ದೇಶ ಸ್ವತಂತ್ರವಾಯಿತು....ಒಬ್ಬ ಮುಖ್ಯಸ್ಥನಾದರು. ಮತ್ತೆ ಜನಾ ಅವನನ್ನು ಹಣತಿಂದ ಅಂದರು.....ಹಾಗೆ....ಸ್ವಾರ್ಥಿ....ದೇಶದ್ರೋಹಿ ಅಂದರು....ಹಾಗೂ........ಹೀಗೂ....ಪದವಿಯಿಂದ ಎತ್ತಿಹಾಕಿದರು....ಮೊನ್ನೆಮೊನ್ನೆ....ಹೊಟ್ಟೆಶೂಲಿಯಿಂದ ಆಯ್ಯೋ ಕೆಟ್ಟೆ....ಅಂತ ಒರಲಿ ಒದ್ದಾಡಿ....ಮನುಜಶರೀರವಿದೇನು ಸುಖ ಅಂತ ಕೊರಗಿ ಕೊನೆಗೆ 'ಗೋವಿಂದಾ' ಅಂದರು....ಮತ್ತೆ....ಇಲ್ಲೇ....ಎಲ್ಲೋ ಆತ ಜನಿಸಿರಬೇಕಲ್ಲವೆ?....ಅಲ್ಲಾ....ಅಂದ್ಹಾಗೆ ಅವರು ಮತ್ತೆ ಮನುಷ್ಯಜಾತೀಲೆ ಹುಟ್ಟಿದಾರ್ಯೆಂತಾ! ಅನುಮಾನವಲ್ಲವೆ?

# ಮಾತಿನ ಮಾನವ

'ಮಾನವನು ಮಾತಿನ ಪ್ರಾಣಿ' "ಮಾನವನ ಮಗು" ಬೆಳೆಯುತ್ತ ಬಂದಂತೆಲ್ಲ ಬುದ್ಧಿ ತಿಳಿದಂತೆಲ್ಲ, ಹೆಚ್ಚು ಹೆಚ್ಚು ಬಳಕೆಯಲ್ಲಿನ ಪದಗಳನ್ನು ಕಲಿತು, ಕೊನೆಗೆ ಭಾಷಾಜ್ಞಾನ ಹೆಚ್ಚಿದಂತೆಲ್ಲ ಮಾತನಾಡಲಾರಂಭಿಸುವುದು ಸ್ವಾಭಾವಿಕ ವಿಧಿ ಎಲ್ಲೋ ಹಲಕೆಲವು ವ್ಯಕ್ತಿಗಳಿಗೆ ಮಾತನಾಡುವ ಹಕ್ಕನ್ನು ಕಲ್ಪಿಸಿರುವುದಿಲ್ಲ. ಅಂತಹವರಿಗೆ ಮೂಗರ ಶಾಲೆಯಿದೆ. ಅಲ್ಲಿ 'ಅವರೂ' ಒಂದು ತರಹ ಮಾತನಾಡುತ್ತಾರೆ! 'ಮಗು ಮಾತನಾಡಲಾರಂಭಿಸುವುದಕ್ಕೆ ಮೊದಲು ಅಳುತ್ತದೆ. ನಿದ್ದೆಗೆ ಅಳು, ಹಸಿವುಗೆ ಅಳು, ಬೇಜಾರಾದರೆ 'ಕಿರ್ರೋ' ಎನ್ನುವುದು ಸ್ವಾಭಾವಿಕ. ಮಾತು ಕಲಿಯುವ ಮೊದಲು....ಅಳುವನ್ನು ಆದಷ್ಟು ಕಡಿಮೆ ಮಾಡಿ ಒಂದು ವಿಧದಲ್ಲಿ ಮಗುಳು ನಗೆ ಸೂಸಿ....ನಂತರ 'ತರಹವಾರಿ' ಶಬ್ದಗಳನ್ನು ಅನುಕರಿಸುತ್ತದೆ. 'ವ್ಯಾ' 'ಬ್ಯಾ' ಅ....ಅ....ಯ ಯ್ಯಾ' ಅನ್ನುವುದು ಸರ್ವ ಸಾಮಾನ್ಯ. ಮಾತೃಬಾಷೆಯನನ್ನುಸರಿಸಿ ಈ ರೀತಿ 'ಶಬ್ದ ಅನುಕರಣ' ಆರಂಭವಾಗುತ್ತದೆ. ಅಂದಮೇಲೆ "ಇಂಗ್ಲೀಷ ಬೇಬಿ" ಗೂ "ಕನ್ನಡ ಕಂದ" ನಿಗೂ, ತಮಿಳರ "ಕೊಳಂದಿಗೂ" ತೆಲುಗುಗರ "ಬಿಡ್ಡಿಗೂ" ಅನುಕರಣದಲ್ಲಿ ಅಜಗಜಾಂತರವಿರುತ್ತದೆ. ಮಗು ಮೊದಲು ಕಲಿಯುವ ಮಾತು ಸಾಮಾನ್ಯವಾಗಿ ನಾಮ ಪದವಾಗಿರುತ್ತದೆ. 'ಮ್ಮ' 'ಣ್ಣ' 'ಮ್ಮು' (ಊಟಕ್ಕೆ) 'ಲಾಲ' (ಹಾಲಿಗೆ) ಇವು ಮಗು ಕಲಿಯುವ ಮೊದಲು ಪದಗಳು. ಕ್ರಮೇಣ 'ಬಾ' "ಉಹುಂ" 'ಸಾಕು' 'ಬೇಕು' ಎಂಬಪದಗಳನ್ನು ಉಚ್ಚರಿಸುತ್ತವೆ. ಇಲ್ಲದಿದ್ದರೆ ಆ ಅರ್ಥ ಬರುವಂತೆ ತಲೆಯಾಡಿಸುತ್ತವೆ. ಈ ರೀತಿ ವ್ಯಾಕರಣ ಕಲಿತು ಸುಲಭ ವಾಕ್ಯಗಳನ್ನು ರಚಿಸುತ್ತವೆ. ಸರಿ....ನಂತರ 'ಆಟ ಊಟ' 'ಓಟ' ಗಳ ಕಡೆಗೆ ಗಮನ ಸೆಳೆಯುತ್ತದೆ. ತಾನು ಉಪಯೋಗಿಸಿದ ಆಟದ ಸಾಮಾನು. ನೋಡಿದ ನೋಟ; ಆಡಿದ ಆಟ ಕಂಡ ಕನಸು(!)ಗಳ ವಿಷಯವಾಗಿ ಕ್ರಮೇಣ ತನಗೆ ತೋರಿದ ರೀತಿಯಲ್ಲಿ ತನಗೆ ಖುಷಿ ಬಂದ ರೀತಿ

ಯಲ್ಲಿ ಗೊಜಗಲಾರಂಭಿಸುತ್ತದೆ. ಯಾರು ಕೇಳಲಿ, ಬಿಡಲಿ, ಅದಕ್ಕೆ ಲಕ್ಷ್ಯ ವಿಲ್ಲ. ತನ್ನ ಆನಂದಕ್ಕೆ, ತನ್ನ ತೃಪ್ತಿಗೆ ತನಗೆ ಬಂದ ಮಾತುಗಳನ್ನೇ ಹಲ ವಾರು ಬಾರಿ ಆಡುತ್ತದೆ. ಹೀಗೆ ಮಕ್ಕಳು ಮಾತನಾಡುವ ಪದಗಳು ಅವು ಗಳ ತಂದೆ ತಾಯಿಯರು ಪೋಷಕರು ವಾಸಿಸುವ ವಾತಾವರಣವನ್ನೂ ಅನುಸರಿಸುತ್ತದೆ. ಬುದ್ಧಿವಿಕಾಸವಾದಂತೆಲ್ಲ ವಯಸ್ಸು ಮೀರಿದಂತೆಲ್ಲ ಪದ ಗಳ ಕಲಿಕೆ ಹೆಚ್ಚಾಗುತ್ತ ಬರುತ್ತದೆ. ಸುಮಾರು ಮೂರು ವರ್ಷದ ಕನ್ನಡ ಕಂದನಿಗೆ ಸಾಮಾನ್ಯವಾಗಿ ಮುನ್ನೂರು ಪದಗಳು ಗೊತ್ತಿರುತ್ತವೆಯೆಂದು ಹೇಳಬಹುದು. ಎಂಟು ವರ್ಷಕ್ಕೆ ನನ್ನ ಮನ 'ದಂಟು' ಎಂಬ ಒಂದು ಗಾದೆ ಯಿದೆ. ಆದರೆ ಆ ಎಂಟು ವರ್ಷದ ಮಗನಿಗೆ 'ದಂಟು' ಎಂಬ ಪದದ ಜೊತೆಗೆ ಇನ್ನೂ ಎರಡುಸಾವಿರದೆಂಟು ಪದಗಳು ಗೊತ್ತಿರುತ್ತವೆ. ಸಾಮಾನ್ಯ ವಯಸ್ಕನಿಗೆ ಸುಮಾರು ಒಂಬತ್ತು ಸಾವಿರ ಪದ, ಬುದ್ಧಿವಂತ ನಿಗೆ ಹನ್ನೊಂದು ಸಾವಿರ, ಅತಿ ಬುದ್ಧಿವಂತನಿಗೆ ಹದಿಮೂರು ಸಾವಿರ, ಪದ ಗೊತ್ತಿರುತ್ತದೆಯೆಂದು ಹೇಳಬಹುದು.

ಸಾಮಾನ್ಯ ಮನುಷ್ಯನು ವರ್ಷಕ್ಕೆ ಸುಮಾರು ಏಳನೂರರಿಂದ ಒಂಬೈನೂರು ಪದಗಳನ್ನು ಹೊಸದಾಗಿ ಕಲಿಯಬಹುದು. ಹೀಗೆ ಹೊಸ ಪದ ಗಳನ್ನು ಕಲಿಯಲು, ಗೆಳೆಯರೊಂದಿಗೆ ಮಾತು, ಶಾಲೆಯ ಪಾಠ ಪ್ರವಚನ ಆಧುನಿಕ ನಾಟಕ ಮತ್ತು ಇತ್ಯಾದಿಗಳು ಇವಕ್ಕೆ ಸಾಧನಗಳಾಗಿರುತ್ತವೆ.

ಈ ಲೆಕ್ಕಾಚಾರವನ್ನು ಕೇಳಿ ಆಶ್ಚರ್ಯವಾಗಬಹುದಲ್ಲವೇ? ಆದರೆ ನೋಡಿ "ಹಲವು ಮಕ್ಕಳು 'ಷಾದಿ' ದಹೆಜ್, ಶೀಷ್‌ಮಹಲ್ ಲಲಿತ ಪದ್ಮಿನಿ ಅಂತ ಅನ್ನುತ್ತವೆ." 'ವಾರು, ಓವಲ್ಟೀನ್, ಕಾಫಿ, ಪೀಪಿ' ಎನ್ನು ವುದಿಲ್ಲವೆ? 'ನೆಹ್ರೂ, ಗಾಂಧಿ' ಎಂದು ಹೆಸರು ಹೇಳುವುದಿಲ್ಲವೆ? ಹಲವು ಮಕ್ಕಳು 'ಖುಷಿ ಹೈ ಕಜಾನ, ತಕದೀರ್‌ಸವಾರೆ. ಲಾರ ಲಪ್ಪಾಪ್ಪಾ' ಎಂದು ಸಿನಿಮಾ ಕುರುಕು ಪದಗಳನ್ನು ಕುರುಕುವುದಿಲ್ಲವೆ?— ಹೀಗೆ ಮಾತು ಕಲಿತು ಮಾತಿನ ಮಲ್ಲಗಳಾಗುತ್ತವೆ!

ಸುಮಾರು ನಾಲ್ಕುವರ್ಷದ ಮಗು ಒಂದು ನಿಮಿಷಕ್ಕೆ ಎಂಟು ಅಥವಾ ಹತ್ತು ಪದಗಳನ್ನು ಮಾತನಾಡುತ್ತದೆ. ಅರವತ್ತು ನಿಮಿಷಕ್ಕೆ ಎಂಟುನೂರ ಎಂಬತ್ತು ಪದಗಳು. ನಿದ್ರೆ ಊಟ, ಆಟಗಳು ಕಳೆದು ಉಳಿದ ಹನ್ನೆರಡು ಹದಿಮೂರು ಗಂಟೆಗಳಲ್ಲಿ ಒಂದೇ ಸಮನೆ ಮಾತನಾಡುತ್ತಿದ್ದರೆ

ಎಷ್ಟೊಂದು ಮಾತುಗಳಾದವು? ಹಾಗೆ ಆಡಿದ ಪದಗಳಲ್ಲಿ 'ಅಮ್ಮ', ಅಣ್ಣ, ಆಟ, ಊಟ, ಬಾ, ಹೋಗು, ಹುಂ, ಎಷ್ಟು ಸಾರಿ ಉಚ್ಚಾರವಾಗಿರುತ್ತವೆ ಯೋಚಿಸಿ! ಒಬ್ಬ ವಯಸ್ಕನು ದಿನಕ್ಕೆ ಮೂವತ್ತರಿಂದ ಐವತ್ತು ಸಾವಿರ ಪದಗಳನ್ನು ಕೇಳಿ, ಹೇಳಿ ಅರಿತಿರುತ್ತಾನೆ. ಸಂಭಾಷಣೆಯಲ್ಲಿ ಒಂದು ನಿಮಿಷಕ್ಕೆ ನೂರೈವತ್ತು ಪದಗಳನ್ನು ಕೇಳುತ್ತಾನೆ, ಆಡಲೂಬಹುದು. ಈ ರೀತಿಯ ಸಂಭಾಷಣೆಗಳಲ್ಲಿ 'ಸಾವಿರ ಸಾರಿ, ನೂರಾರು ಬಾರಿ ಆ ಮೇಲೆ ಹಲವಾರು ಸಾರಿ' ಹುಂ, ಅಂದರೆ ಶೇಕಡಾ ಐವತ್ತರಷ್ಟು. ಈ ಮಾತು ಕತೆ ಮಾನವನ ಸ್ವಭಾವ ಹಾಗೂ ಅವನ ಅವಲಂಬಿಸುವ ಉದ್ಯೋಗ ಬಹಳ ಮಟ್ಟಿಗೆ ಹೊಂದಿಕೊಳ್ಳುತ್ತದೆ. ಆಫೀಸು ಕೆಲಸದವರಿಗಿಂತ ವ್ಯಾಪಾರಸ್ಥರಿಗೆ (Business men) ಮಾತಿನ ವರಸೆ, ಚಾಕಚಕ್ಯತೆ ಚೆನ್ನಾಗಿ ಗೊತ್ತಿರುತ್ತದೆ. ಅಂಥವರು ಬೆಣ್ಣೆಯಲ್ಲಿ ಕೂದಲು ತೆಗೆದಂತೆ ನೈಸಾಗಿ ಮಾತನಾಡಬಲ್ಲರು. ಡಾಕ್ಟರು, ಇಲ್ಲವೆ ಕ್ಲಾರ್ಕ್, ಅಥವಾ ಟೈಪಿಸ್ಟ್‌ಗಳಿಗಿಂತ ಮೇಷ್ಟ್ರುಗಳು ಹೆಚ್ಚು ಮಾತನಾಡುತ್ತಾರೆಂಬುದು ಸರ್ವ ವಿದಿತ. ಬರಹಗಾರರು ಸಾಮಾನ್ಯವಾಗಿ ಹೆಚ್ಚು ಮಾತಿನಮಲ್ಲರಲ್ಲ.

ಈ 'ಮಾನವನ ಮಾತಿನ ಮಲ್ಲತನ' ಯಾವುದಾದರೂ ಮಾತೃಭಾಷೆಯ ಬೆಳವಣಿಗೆಗೆ ಬಹಳ ಮಟ್ಟಿಗೆ ಧಕ್ಕೆ ತರಬಹುದು (?) ಸಂಸ್ಕೃತ, ಅಸಂಸ್ಕೃತವಾಗಬಹುದು. ಹಿಂದಿ, ಮುಂದಾದರು—ಸರಿ, ಹಿಂದಾದರೂ ಸರಿ; ಇಂಗ್ಲೀಷದೊಂದಿಗೆ ಫ್ರೆಂಚ್ ಬೆರೆಯಬಹುದು. ನಮ್ಮ ಭಾರತದಲ್ಲಿ, ಬಾಷಾ ಸಮಸ್ಯೆ ಬಹಳವಾಗಿ ಇಂದಿನ ಮುಖ್ಯ ಸಮಸ್ಯೆಯಾಗಿದೆ. ಮಾತಿನ ಭರದಲ್ಲಿ ಕನ್ನಡಕ್ಕೆ ಹಿಂದಿ ಬೆರೆಯಬಹುದು. ಹಿಂದಿಗೆ ಇಂಗ್ಲೀಷ್ ಬೆರೆಯಬಹುದು—ಅಂತೂ 'ಕನ್ನಡಂ ಕಸ್ತೂರಿಯಲ್ತೆ' ಗಾದೆ 'ಕನ್ನಡಂ ಮಸಾಲೆ ಭಾಷೆಯಲ್ತೆ' ಯಾಗಬಹುದು.

ಆಂದ ಮೇಲೆ ಮಾನವನು ಪ್ರಗತಿಪಥದಲ್ಲಿ ಹೆಜ್ಜೆಯಿಟ್ಟು ಬಹಳ ಮಟ್ಟಿಗೆ ನಾಗರಿಕನಾಗುತಿದಾನೆ. ನಮ್ಮ ಭಾರತದಲ್ಲಿ ಇಂದು ಸ್ವತಂತ್ರವಾದ ಭಾರತದಲ್ಲಿ ಮಾನವನ ಮಾತು ವಿಪರೀತವಾಗಿದೆ. ಹಿಂದಿನ ಹತ್ತಾರು ವರ್ಷಗಳ ಭಾರತದ ಮಕ್ಕಳು ಆಮರವನ್ನು ಹೇಳುತ್ತಿದ್ದವು. ಶ್ಲೋಕಗಳನ್ನು ರಾಗವಾಗಿ ಸರಾಗವಾಗಿ ಹೇಳುತ್ತಿದ್ದವು. ಇಂದು ಮಕ್ಕಳು 'ಸ್ವಾಮಿದೇವನೆ

ಲೋಕಪಾಲನೆ ' ಬದಲಾಗಿ 'ಆಜಾ ಆಜಾ' ಹೇಳುತ್ತವೆ. ' ಮಾಮಿಯ ' ಫೋಟೋಗಳನ್ನಿಟ್ಟುಕೊಂಡು ಪೂಜೆಮಾಡಿ ಆಟವಾಡಿ ನಲಿಯುವುದರ ಬದಲು 'ಸುರೈಯ, ನರ್ಗಿಸ್ ದಿಲೀಪ ಕುಮಾರ'ರನ್ನು ಆರಾಧಿಸುತ್ತವೆ!

ಸ್ವಾತಂತ್ರ್ಯ ಬರುವುದಕ್ಕೆ ಮುಂಚೆ ಅದರಲ್ಲೂ ಸಂಪು ಹೂಡಿದ ಕಾಲದ ಮಾತಿನಮಲ್ಲ ಮಂಕಾಗಿದ್ದ. ಆಗಸ್ಟು ಹದಿನೈದರಿಂದ ಅವನ ಮಾತಿಗೆ ಮಿತಿಯೇ ಇಲ್ಲ. ಬಿಗಿಯೇ ಇಲ್ಲ!—ಈಗ ಮಾನವನ ಮಾತಿಗೆ ಬೆಲೆಯೂ ಇಲ್ಲ. 'ಕೂತರೊಂದು ಕುಹಕ, ನಿಂತರೊಂದು ಚುರುಕು-ಚೂರು ಮಾನವನ ನಿತ್ಯಜೀವನದ ಸತ್ಯವಾಗಿದೆ.

ಇತ್ತೀಚಿನ ಸಾಹಿತ್ಯ ಮಾತಿನಂತೆ........ಅದರ ಪ್ರತಿಬಿಂಬ—ಸಾಹಿತ್ಯದ ಶೀಲವೇ ಶಿಥಿಲವಾಗುತ್ತಿದೆಯೆಂದೂ ಹಲವು ವೇಳೆ ಹೇಳಬಹುದು.

ಚಿನ್ನದ ನಾಡಿನ, ವೀಣೆಯ ಬೆಡಗಿನ ಮೈಸೂರಿಯನ್ನರನ್ನೇ ತೆಗೆದುಕೊಳ್ಳೋಣ! ಪ್ರಜಾಪ್ರಭುತ್ವ ಸ್ಥಾಪಿತವಾಗುವುದಕ್ಕೆ ಮುಂಚೆ ' ಸ್ಟ್ರೈಕ್ ಪಿರಿಯಡ್ಡಿ 'ನಲ್ಲಿ ಮಾತಿನ ಭರ ಕಡಿಮೆಯಾಗಿತ್ತು—ಜನರ ತುಟಿಯಂಟಿಕೊಂಡಿತ್ತು. 'ಮೈಸೂರು ಚಲೋ' ಆದಾಗಲಂತೂ ಗಂಟಲೇ ಒಣಗಿತ್ತು. ಮೈಸೂರು ಚಲೋ ಮುಗಿದು ಪ್ರಜಾಪ್ರಭುತ್ವ ಏರ್ಪಟ್ಟು....ಜನ ನಕ್ಕು ನಲಿಯಲಾರಂಭಿಸಿದರು........ಸರಿ ಮಾತಿನ ಸುರಿಮಳೆ! ಜನ ಈಗ ಪುರಿ ಹುರಿದ್ಹಾಗೆ ಮಾತನಾಡುತ್ತಾರೆ! ಅನಾವಶ್ಯಕ ಟೀಕೆ ಟಿಪ್ಪಣಿಗಳು ಭೂ ಬಾಣ, 'ಥೂ ಬಾಣ,' 'ಹೂ ಬಾಣ' ಕಿಡಿಗಳಿಗಂತೂ ಲೆಕ್ಕವೇ ಇಲ್ಲ! ಅಬ್ಬಾ....ಅದೇನು ಸ್ವಾತಂತ್ರ್ಯ....ಅದೇನು ಮಾತು....ಅಯ್ಯೋ ಅಯ್ಯೋ ....ಸ್ವತಂತ್ರರಾಜ್ಯದಲ್ಲಿ ಮಾತಿಗೂ ಕಂಟ್ರೋಲ್ ಬರಬಾರದೇಕೆ ?

# ಹೇ ಮಾನವ

'ಏ ಮಾನವ!....ಏಯ್! ಹೇ....ಮಾನವ!....ಬೇಡ, ಉಹುಂ, ಬೇಡ....ಅಯ್ಯೋ....ನಿನ್ನ ದಮ್ಮಯ್ಯ, ನಿನ್ನ ದತ್ತಯ್ಯ ಬಿಟ್ಟುಬಿಡು.... ನನ್ನನ್ನು ಬಿಟ್ಟುಬಿಡು. ಒಂಟಿಯಾಗಿ ಸಿಕ್ಕಿದರೆ ಸಾಕೆಂದು ಸಮಯ ಕಾದು ಕೊಂಡಿದ್ದೆಯಾ?....ಈಗ ನಾನು ಮಾತ್ರ ಒಬ್ಬಂಟಿಗ, ನನ್ನನ್ನು ಈ ರೀತಿ ಚಿತ್ರಹಿಂಸೆಗೆ ಗುರಿಪಡಿಸಿ ಈಗ ಕೊರಳುಕೊಯ್ಯಲೆಣಿಸಿರುವೆ! ನೀನು ನನಗೆ ಕೊಟ್ಟಿರುವ ತೊಂದರೆ ಒಂದೆ ಎರಡೆ? ಯಾವ ನೀಚ ಅತ್ತೆಯೂ ಸೊಸೆಗೆ ಇಷ್ಟತೊಂದರೆ ಕೊಟ್ಟಿರಲಾರಳು. ಅಯ್ಯೋ ನನ್ನ ದುರಾದೃಷ್ಟ, ನನ್ನ ಬಾಳೆ! ನೂರಾರು ಒಡನಾಡಿಗಳೊಂದಿಗೆ ಹುಟ್ಟಿ ತಾಯಿಯ ತೋಳಲ್ಲಿ ಬೆಳೆದೆ. ಚಿಕ್ಕಂದಿನಿಂದ ಸೋದರರೊಡನೆ ತೂಗುಯ್ಯಾಲೆಯಾಡುತ್ತಿದ್ದೆ. ನನ್ನ ತುಂಬು ಯೌವನದಲ್ಲಿ ಒಡನಾಡಿಗಳೊಂದಿಗೆ ಯಾರು ಕಾಣದ, ಕೇಳದ ರಲ್ಲೋಕಕ್ಕೆ ಸೇರಿಸಿದೆ! ಹಾಯಾಗಿ ಹವಾ ಹೀರುತ್ತಿದ್ದ ನನ್ನನು ಡಂಜನ್ನಿನಲ್ಲಿ ಹುಲ್ಲು ಹಾಸಿಗೆಯ ಮೇಲೆ ಮಲಗಿಸಿದೆ. ಯೌವನವು ಹೋಗಿ ಜಡೆ ಬಂತು, ಮೈ ಕೈಯೆಲ್ಲಾ ಸುಕ್ಕಾಯಿತು. ಏನು ಸ್ವಾರ್ಥಿಯಪ್ಪಾ ನೀನು ಹೇ ಮಾನವ....ಅದೆಷ್ಟು ನಿಷ್ಕರುಣೆ ನೀನು? ನನ್ನ ಒಡ ಹುಟ್ಟಿದವರೊಂದಿಗೆ ನನ್ನನ್ನೂ ಹಿಡಿತಂದು, ಸರಪಳಿಗೆ ನೇತುಹಾಕಿದೆ. ಹಗ್ಗ ಕಟ್ಟಿ ಹಾದಿ ಹೋಕರು ಕಾಣುವಂತೆ ಪಬ್ಲಿಕ್ಕಾಗಿ ಹ್ಯಾಂಗ್ ಮಾಡಿದೆ! ಕಂಡ ಕಂಡವರು ಬಂದು ಮೈ ಮುಟ್ಟಿ ಮಾನ ಕಳೆಯುವಂತೆ ಮಾಡಿದ್ದೆ, ಹೇ ಮಾನವ, 'ಅಡಮ್ಮ'ನ ಮಾನವ....ಛೀ ನಾನಿನ್ನಿರಲಾರೆ, ಬಿಟ್ಟುಬಿಡು. ಹುಂ....ನೀನ್ ಬಿಟ್ಟರೆ ತಾನೆ ನಾನೆಲ್ಲಿ ಹೋಗಲಿ? ಅಮ್ಮ ಎಲ್ಲಿ? ಅಕ್ಕ ತಂಗಿಯರೆಲ್ಲಿ? ಅಬ್ಬಾ ನಾನು ತಂದೆತಾಯಿ, ಅಕ್ಕ ತಂಗಿ ಅಣ್ಣ ತಮ್ಮಂದಿರೊಂದಿಗಿದ್ದುದು ನಿನಗೆ ಹೊಟ್ಟೆಯುರಿಯಿತೇನು? ನನ್ನ ಬೇರ್ಪಡಿಸಿ, ಸೋದರರಿಂದ ದೂರಮಾಡಿದೆ. ನಿನ್ನ ದತ್ತಯ್ಯ, ಬಿಟ್ಟುಬಿಡು........ಉಹೂ........ಕೊಂದೇ ಬಿಡು, ಅಬ್ಬಾ

ಕತ್ತು ಚಿವುಟಿ ಚರ್ಮಸುಲಿದು ಅಯ್ಯೋ ಅಯ್ಯಯ್ಯೋ........ನುಂಗಿಯೇ ಬಿಡುವೆಯಾ ?

*     *     *     *

ಮೊನ್ನೆ ದೇವರಾಜ ಮಾರ್ಕೆಟ್ಟಿನಲ್ಲಿ ಒಂದಾಣೆ ಕೊಟ್ಟು ಒಂದು ನಂಜನಗೂಡು ರಸಬಾಳೆ ಹಣ್ಣುಕೊಂಡು ಕತ್ತು ಚಿವುಟಿ, ಚರ್ಮ ಸುಲಿದು ಗೊಳಕ್ಕನೆ ನುಂಗಿಯೇ ಬಿಟ್ಟೆ !

# ‘ ಥೂ ಹೋಗೀಂದ್ರೆ ’

[ ಇದೊಂದು ಕದ್ದು ಕೇಳಿದ ಕಾನ್‌ವರ್ಸೇಷನ್ನೇ ? ಇಲ್ಲವೇ, ದೊಡ್ಡವರ ಗುಟ್ಟನ್ನೆಲ್ಲಾ ರಟ್ಟುಮಾಡಲು ಹೂಡಿದ ಕುತಂತ್ರವೇ ? ಅಥವಾ ಲೇಖಕರೇ ‘ ಥೂ ಹೋಗೀಂದ್ರೆ ’ ಅನ್ನಿಸಿಕೊಂಡು ಕಪಟನಾಟಕವನ್ನು ಕಟ್ಟಿದ್ದಾರೆಯೇ ?.... ........ವಾಚಕರೇ ನಿರ್ಧರಿಸಿದರೆ ಒಳಿತಲ್ಲವೆ? ]

“ಥೂ....ಹೋಗೀಂದ್ರೆ.

“ಅಹ....ಹ್ಹ ಹ್ಹಾ....ಲೇ....ಏನ್ಹಾಗಾಡ್ತೀಯೇ? ನೀನು....ನೀನು ಯುಂತ ವಳೂಂತೀಯಾ ! ಎಲ್ಲಿ....ತಾ....ಇಲ್ಲಿ....ಬಾ....ಬಾ.... ಹುಂ.... ಇನ್ನೂ ಹತ್ತಿರ ಬಾ........”

“ಸಾಕು, ಸಧ್ಯ ನಿಮ್ಹುಡ್ಗಾಟ ಏನೂಂದ್ರೆ....ನಾಚಿಕೆಯಾಗೋಲ್ವೆ ?”

“ಅಲ್ಲಾ ಕಣೇ....ನಾನು....ನಿನ್ನ....ಸ್ವತಃ ಕೈಹಿಡಿದ ಹೆಂಡತೀನ....ಮಾತನಾಡಿಸೋದೆ....ನಾಚಿಕೇನೇ? ನೀನು....ನನ್ನ ಮಾತನಾಡಿಸೋದೆ ....ಅವಮಾನವೇ ?....ಚೆನ್ನಾಯ್ತು....ನೋಡು....ಆ ಕಾಲೇಜು ಬಾರ್ಡರ್ ....ಸೀರೆ....ಅದೇ....ಬ್ಲಾಕ್ ವಾಯಿಲ್ಲಿಂದು....ನೀನು ಉಟ್ಕೊಂಡರೆ....ಆ ಬ್ಲೌಸ್ ಯಾವುದು....? ಅದೇ....ನಿಮ್ಮ ರಾಮಣ್ಣನ ಮದುವೇಲಿ ನಿನಗೆ ಹಣಿಗಿಟ್ಟು ಕೊಟ್ಟಿದ್ದರಲ್ಲಾ....ಬಳುವಳಿ....ಆ ಸಿಲ್ಕು. ಅದನ್ನು....ನೀನೇ.... ಮದುವೇಲಿ ಬಂದ ಆರತಿ ದುಡ್ಡಿನಲ್ಲಿ....ಹೊಲಿಸಿಕೊಂಡಿಯಲ್ಲಾ ಅದು.... ಹಾಕಿಕೊಂಡರೆ....ಅದೆಷ್ಟು ಚೆನ್ನಾಗಿ ಕಾಣ್ತೀಯೇ! ಕಣ್ತುಂಬ ನೋಡ್ಬೇಕು ಅನ್ನಿಸುತ್ತೆ ಕಣೆ. ”

“ಅಯ್ಯೋ.... ಸುಮ್ಮನಿರಿ. ಯಾವತ್ತೂ ಅಷ್ಟೆ, ನಿಮ್ಹುಡುಗಾಟ.... ಕುಚೇಷ್ಟೆ....ಆಂ, ಏನಂದ್ರಿ? ಆ ಬ್ಲಾಕವಾಯಿಲ್ ಚೆನ್ನಾಗಿಲ್ಲಾಂದ್ರೆ....ಬಣ್ಣ ಮಂಕಾಯ್ತು. ”

ಸರಿ....ನನ್ನ ಕಣ್ಣಿಗೆ ಚೆನ್ನಾಗಿದೆ....ನನಗೆ ಚೆನ್ನಾಗಿರೋದು ನಿನಗೆ ಚೆನ್ನಾಗಿರೋಲ್ಲ. ನಿಂಗೆ ಚೆನ್ನಾಗಿರೋದು ನಂಗೆ ಚೆನ್ನಾಗಿ ಕಾಣೊಲ್ಲ.... ಯಾವತ್ತು ಕಷ್ಟ....ಏತಿ....ಅಂದರೆ....ಪ್ರೀತಿ.... ಹುಂ....ನಿಮ್ಮಪ್ಪನ ಮನೆಯಲ್ಲಿ ಉಡಿಸಿದ್ದಾರೆಂದು....ಆ ಪಟ್ಟೆವಾಳೆ.... ಧರ್ಮಾವರದ ಸೀರೇನೆ.... ಪೆಟ್ಟಿಗೆಯಿಂದ ತೆಗಿ....ಅರ್ಧತೋಳಿನ ರವಿಕೇನೆ ಧರಿಸಿಕೋ........ಅಲ್ಲಾ ....ಅದೆಷ್ಟು ವರ್ಷದಿಂದ ಇಟ್ಟಿದೀಯೇ....ಆ ಸೀರೆ....ಆ ರವಿಕೇನ....ನಿಮ್ಮಪ್ಪನ ಆಸ್ತೀನ! ಅಯ್ಯೋ....

ಸಧ್ಯ....ಸಾಕು....ಸುಮ್ಮನಿರಿ....ನನ್ನ ರೇಗಿಸ್ಬೇಡಿ....ನಾನೇನು ಎಳೇ ಹುಡ್ಗೀನೆ! ಘಳಿಗೆಗೊಂದು ಸೀರೆ....ಉಟ್ಕೊಂಡು, ಕ್ಷಣಕ್ಕೊಂದು ಕುಪ್ಪಸ ಹಾಕಿಕೊಂಡು, ಹತ್ತತ್ತು ನಿಮಿಷಕ್ಕೊಂದು ಸಾರಿ ಪೌಡರ್ ಹಚ್ಚಿಸಿಕೊಂಡು, ಐದೈದು ನಿಮಿಷಕ್ಕೊಂದು ಬಾರಿ ಕೆದರಿದ ಕೂದಲು ಸರಿಮಾಡಿಕೊಳ್ಳೋಕೆ? ಥೂ........ಹೋಗೀಂದ್ರೆ!

....ಅಲ್ಲಾ....ಹಾಗಲ್ಲ....ಯಾರಿಗಾಗಿ....ನೀನು ಇಷ್ಟೆಲ್ಲಾ ಸಿಂಗರಿಸಿಕೊಳ್ಳೋದು....ವಯಸ್ಸಾದ ಮಾತ್ರಕ್ಕೆ ಅಲಂಕಾರ ಮಾಡಿ ಕೊಳ್ಳೋದೆ ತಪ್ಪೆ? ಸರಿ....ಸರಿ....ಬಾ....ಬಾರೇ....ಬಂಗಾರು....ಬಾರೇ ಬಿನ್ನಾಣಗಿತ್ತಿ.

ಏಯ್....ತಥ್....ಬಂಗಾರವಂತೆ....ಬಂಗಾರು.... ಮಕ್ಕಳಾಯ್ತು.... ........ಮರಿಯಾಯ್ತು....ಇನ್ನೂ ಬಂಗಾರು....ಹುಡ್ಗಾಟ....ಚೆಲ್ಲಾಟ.... ಆಲ್ಸೋಡಿ....ಆಶ್....ನಮ್ಮ ತಾಪತ್ರಯನಾ....ಯಾರಿಗೆ ಬೇಕಾಗಿದೆ.... ನಿಮ್ಮಾಟ. ನಿಮ್ಮ ಮಣಿಮಾತು! ಪಾತೂಗೆ ಲಂಗವಿಲ್ಲ....ಜಯಂಗೆ ಜಂಪರ್ ಇಲ್ಲ....ಕಿಟ್ಟಿಂಗೆ ಕೋಟಿಲ್ಲ.... ಶಾಮಿಗೆ ಶರ್ಟಿಲ್ಲ.... ಕೈಯಾಗಿನ ಮಗು ಕಮಲೇಗೆರಡು ಒಳ್ಳೇ ಒಳಗೆ ಹಾಕೋಕೆರಡು ಚೋಟುದ್ದ ಬನೀನೂ ಇಲ್ಲ ....ಬಟ್ಟೆ ತಂದ್ಕೊಡಿ....ನಾನೇ ನನಗೆ ತಿಳಿದ ಹಾಗೆ ಹೊಲೀತೇನಿ ಅಂತಾ ....ಅವತ್ತಿನಿಂದ ಹೇಳ್ತಾ ಇದೀನಿ....ನನಗೊಂದು ಉಡೋಕೆ ಒಳ್ಳೇ ಸೀರೆಯಿಲ್ಲ !

ಯಾಕೆ....ಮೊನ್ನೆ....ಪೇಟೆಗೆ ಹೋಗಿದ್ದಾಗ....ಒಂದು ಒಳ್ಳೇ ಸೀರೆ ....ತಗೋ....ಅಂದ್ರೇ....“ಅಯ್ಯೋ ಬೇಡಾಂದ್ರೇ....ಏನು ಸೀರೇನೋ.... ಏನೋ....ನೂಲಿಂದು....ಅಂದೆ....ಬೆಂಗಾಳ್ ಸಿಲ್ಕ್ ಸೀರೇನೇ ತೆಗೆದುಕೋ

....ಆಂದ್ರೆ....ಆಶ್ ಅದೇನು ಚೆನ್ನಾಂದ್ರೆ....ಚಿರತೆ ಹಾಗೆ....ಅಂದುಬಿಟ್ಟೆ! ಖರ್ಚಿನ ಜೊತೆಗೆ ಖರ್ಚು....ಹೇಗಿದ್ರೂ....ಸಂಬಳ ಬಂದಿತ್ತು. ಹೇಗೋ ಈ ತಿಂಗಳು....ಸಾಲವೋ....ಸೋಲವೋ ಅಡ್ಜಸ್ಟ್........ಮಾಡ್ಕೊ ಬಹು ದಾಗಿತ್ತು........

ಆಶ್....ನಿಮ್ದು ಯಾವಾಗಲೂ ಹೀಗೇ....ನನ್ನ ಮೇಲೆ ತಪ್ಪು ಹಾಕೋದು....ಹೋಗ್ಲಿ ಬಿಡಿ ಇನ್ನಾವಾಗಲಾದ್ರು....ದುಡ್ಡಿದ್ದಾಗ....ಒಂದು ಒಳ್ಳೇ ಮೈಸೂರು ಸಿಲ್ಕ್ ಸೀರೇನೇ....ತೆಗಿಯೋದು!

ಹುಂ....ಹಾಗನ್ನು ಮತ್ತೆ....ಅಲ್ಲ ಬಾ....ಇಲ್ಲಿ ಏನೇ....ಅದು ಕೆನ್ನೇ ಹತ್ರ.

ಅಯ್ಯೋ ರಟ್ಟೇ ಹಿಡಿದು ಎಳೀ ಬ್ಯಾಡೀಂದ್ರೆ.

ಓಹೋ.... ಎಲ್ಲೂ.... ಇಲ್ಲದ ನಾಚಿಕೆ ಅಲ್ಲಾ ಕಣೆ.... ಏನ್ಹಾಗಾಡ್ತೀಯೆ !

" ಲಲಿತಮ್ಮಾ....ಲಲಿತಮ್ಮಾ....ಲಲಿತಮ್ಮಾ ! "

ಆಂ....ಯಾರು....ನೀವೇ.... ಬನ್ನಿ ಸುಶೀಲಾಬಾಯಿ....ಕುತ್ಕೊಳ್ಳಿ....

" ಅಯ್ಯೋ.... ಇಲ್ಲಾಂದ್ರೆ....ಹೋಗ್ಬೇಕು....ಸ್ವಲ್ಪ ಚಕ್ಕಲಿ ಒರಳು ಇದ್ದರೆ ಕೊಡ್ರಿ, ಇವತ್ತೇ ತಂದ್ಕೊಡ್ತೀನಿ........"

ಲೇ....ಲೇ....ಇಂದು....ಮಾರ್ಕೆಟ್ ಕಡೇಗೇ ಹೋಗ್ತೀನಿ....ಏನಾದ್ರೂ ಮನೇಗೆ ಸಾಮಾನು ತರಬೇಕೇನೆ....

ಏನೂ ಇಲ್ಲಾಂದ್ರೆ....ಒಂದು ಪೌಂಡು ಕಾಫೀ ಪುಡಿ ಏನಾದರೂ.... ಒಂದಿಷ್ಟು ತರಕಾರೀ, ಹಿಡ್ಕೊಂಡು ಬಂದುಬಿಡಿ ಯಷ್ಟೆ....

ಹುಂ....

" ಅಯ್ಯೋ....ನಿಮ್ಮ ಯಜಮಾನರಿದಾರೇಂದ್ರಿ....ಬರ್ತೀ ನಮ್ಮಾ.... ಆ ಮೇಲೆ.... "

ಇಲ್ಲಾಂದ್ರೆ, ತಡೀರಿ, ಚಕ್ಕಲಿ ಒರಳು ಹುಡುಕಿ ಕೊಡ್ತೀನಿ....ಕೊಂಚ ....ಹುಂ....ತಗೊಳ್ಳಿ.

"ಬರ್ತೀನಿ....ಲಲಿತಮ್ಮ. "

ಹುಂ....ಕುಂಕುಮ ಕೊಳ್ಳಿ.

# ಭಾರಿ ಹುದ್ದೆ

ಕನ್‌ಗ್ರ್ಯಾಚುಲೇಷನ್ಸ್....ಸಾರ್....ಬೇಷ್, ನಿಮ್ಮ ಲಕ್ಕೇ ಲಕ್ಕು ! ಪರವಾಗಿಲ್ಲ....ಒಳ್ಳೆ ಭಾರಿ....ಬೇರೆ ಕೆಲ್ಸ ಸಿಕ್ಕಿತಂತೆ. ಭಾಳ ಸಂತೋಷ.... ಯಾವಾಗಲಿಷ್ಟು....ಒಂದು ಟೀಪಾರ್ಟಿ ಅರೇಂಜ್ ಮಾಡಿ ಸಾರ್....'ಉಪಾಧ್ಯಾಯಶ್ಚ, ವೈದ್ಯಾಶ್ಚ' ಅಂತಾ ಹೇಳ್ತಾ....ಈ ಮೇಷ್ಟ್ರು ಕೆಲ್ಸ ಜನ್ಮ ಜನ್ಮಾಂತರಕ್ಕೂ ಬೇಡಪ್ಪಾ....ಅಂತಿದ್ರಿ.... ಅದಕ್ಕೆ ಸರಿಯಾಗಿ ಬೇರೆ ಭಾರೀ ನೌಕರಿ ಸಿಕ್ಕಿದ್ದು ನಿಮ್ಮ ಅದೃಷ್ಟವಲ್ಲದೆ ಮತ್ತೇನು ?....ಅಲ್ಲಾ ಸಾರ್.... ನಾನು ನಿಮ್ಮ ಆಪ್ತ....ನನಗೇ ಇನ್ನೂ ತಿಳಿಸಲಿಲ್ಲವಲ್ಲ! ಅದೇ ನಿನ್ನೇ ನಮ್ಮ ಮನೆ ಹೆಂಗಸರು ನಿಮ್ಮಮನೆಗೆ ಬಂದಿದ್ದಾಗ ಅದೂ....ಇದೂ....ಮಾತಾಡ್ತ ನಿಮ್ಮಾಕೆ ಹೇಳಿದ್ದರಂತೆ.

ಹೀಗೆ ಹೊಸ ನೌಕರಿ, ಸರ್ಕಾರಿ ಹುದ್ದೆ....ಈ ಕಾಲದಲ್ಲಿ ಸಿಕ್ಕೋದು ಪುಣ್ಯವಲ್ಲವೇ? ನಾಳೆಯಿಂದಲೇ....ಡ್ಯೂಟಿ ಮೇಲೆ ಹಾಜರಾಗಬೇಕಂತೆ ... ಅಂತೆಲ್ಲ ಹೇಳಿದ್ರಂತೆ. ನನ್ನಾಕೆ ನನ್ನನ್ನ ನೀವು ಈ ಹಾಳು ಅಂಗಡಿ ಮೇಲೆ ಕೂರೋ ಕೆಲ್ಸ ಬಿಟ್ಟು ಸುಶೀಲಮ್ಮನ ಯಜಮಾನ್ರ ಹಾಗೆ ಹೇಗಾದರೂ ಮಾಡಿ ಒಂದು ಭಾರಿ ಹುದ್ದೆ ಗಿಟ್ಟಿಸಿ....ಆಫೀಸರಾಗಬಾರ್ದೇಕೆ? ನಂಗೆ ನೀವು ಆಫೀಸರಾಗಬೇಕಂತ ತುಂಬಾ ಆಶೆ....ಅಂತ ನನಗೆ ಸಲಹೆ ಕೊಟ್ಳು.

ಅಂದ್ಹಾಗೆ ಸುಬ್ಬರಾಯರೆ,ಸ್ವಾತಂತ್ರ್ಯ ಬಂದಿದಕ್ಕೆ ಸಾರ್ಥಕವಾಯ್ತು. ಸರಕಾರ, ಜಾತಿ ಮತಭೇದವಿಲ್ಲದೆ ನ್ಯಾಯವಾಗಿ ಜನರಿಗೆ ನೌಕರಿ ಕಲ್ಪಿಸಿ ಕೊಡುತ್ತಿದೆ. ಸಾರ್....ಅಂತೆಲ್ಲ....ಪಾಪ....ಮನಕರಗಿ ಮರುಗಿ ಖುಷಿ ಪಟ್ಕೊಂಡು ಅದೇ....ಅವರು........ನನ್ನ ಗೆಳೆಯ ಗೋವಿಂದರಾಯರು ನನ್ನನ್ನ ಅಭಿನಂದಿಸಿದರು....ಮೊನ್ನೆ ಬಸ್ ಸ್ಟಾಪಿನಲ್ಲಿ ಸಿಕ್ಕಿ.

....ನಾನಂದೆ....ಹೌದು ಮಿಸ್ಟರ್ ಗೋವಿಂದರಾವ್ ಭಾರಿ ಹುದ್ದೆ ದೊರಕಿದೆ....ಅದೇ 'ಸೆನ್ಸಸ್ ಎನ್ಯೂಮರೇಟರಾಗಿ ' ಹುಕುಂ ಬಂದಿದೆ ........ಎಂದು ಹೌಸ್ ಬ್ಲಾಕ್‌ಲಿಸ್ಟ್ ಹಿಡಿದುಕೊಂಡು ಬೌಂಡರಿ ಚೆಕ್ ಮಾಡೋಕೆ ಬಸ್ ಹತ್ತಿದೆ.

# ಏನಮ್ಮಾ ನಾವು ?

[ ಬಾಲ:ಏನಂತಹ ಇಂಡ್ಯನರ ಪಾಡೇ ಹೀಗಾದಮೇಲೆ ಉಳಿದವರ ಪಾಡು ? ಇವನಂತಹವರು ಕೋಟಿಗಟ್ಲೆ ಇದಾರೆ; ದೇಶ ಸ್ವಾತಂತ್ರ್ಯವನ್ನುಳಿಸಿಕೊಳ್ಳುವುದೆಂತು ? ಇದೊಂದು ಮಹಾ ಜಟಿಲ ಪ್ರಶ್ನೆ. ಶ್ರೀಮಾನ್....ರವರ ಒಣಲೇಖನಿಯ ವೈಖರಿಯನ್ನು ನೋಡಿ. ]

ನಮ್ಮ ಸ್ವಾತಂತ್ರ್ಯವನ್ನು ನಾವು ಸಂರಕ್ಷಿಸಿಕೊಳ್ಳದಿದ್ದರೆ....ಇಲ್ಲದಿದ್ದರೆ....ರೂಮಿನಲ್ಲಿಟ್ಟು ಬೀಗ ಹಾಕಿ .... ಬೀಗದ ಕೈ ಯಾವಾಗಲೂ ....ಜನಿವಾರದಲ್ಲಾಗಲಿ, ಜುಟ್ಟಿನಲ್ಲಾಗಲಿ, ಛೆ, ಜುಟ್ಟಿನಲ್ಲಾಗಲಾರದು! ಉಡುದಾರದಲ್ಲಾಗಲಿ, ಕತ್ತಿಗೊಂದು ದಾರ ಕಟ್ಟಿಕೊಂಡು(?) ನೇತು ಹಾಕಿಕೊಳ್ಳುವುದಾಗಲಿ, ಕೋಟಿದ್ದರೆ ಅದರ ಸಣ್ಣ ಕಿಸೆಯಲ್ಲಿ, ಜುಬ್ಬವಿದ್ದರೆ ಅದರ ಎಡಜೇಬಿನಲ್ಲಿ, ಹೆಂಗಸರು....ಪಿನ್ನು ಸಿಕ್ಕಿಸಿಕೊಂಡು ಕತ್ತಿನಲ್ಲಿ, ಇಲ್ಲವೆ ಬಳೆಯಲ್ಲಿ ಅಲ್ಲವೇ, ಸೀರೆಯ ಸೆರಗಿನ ತುದಿಯಲ್ಲಿ....ಅಂತು ಅವರ ಅವರ ಅನುಕೂಲ, ಅನಾನುಕೂಲಗಳಿಗೆ ತಕ್ಕಂತೆ ಸ್ವರಾಜ್ಯದ ಬೀಗದ ಕೈ ಭದ್ರವಾಗಿಟ್ಟುಕೊಂಡರೇ ಸರಿ....ಇಲ್ಲದಿದ್ದರೆ ಕಳ್ಳರು ಕೊಳ್ಳೆ ಹೊಡಿಯುವುದು ಖಂಡಿತ ! ಅಬ್ಬಾ ! ಈಗ, ಕೇವಲ ಅಹಿಂಸೆಯ ಹಿಂಸೆಯಿಂದ ಬಂದಿರುವ ಸ್ವರಾಜ್ಯ ಕೈಯಿಂದ ಕಳಚಿ ಬೀಳುವುದು.... ಜೋಕೆ—ನಮ್ಮ ಬೇ ಜವಾಬ್ದಾರಿ ಹೆಚ್ಚು; ಜವಾಬ್ದಾರಿ ಮಿತಿ ಮೀರಿದೆ. ಪ್ರತಿಯೊಬ್ಬ ಇಂಡ್ಯನೂ ತನ್ನ ಬೇ ಜವಾಬ್ಧಾರಿಯನ್ನು ಕಿತ್ತು, ಚೂರು ಚೂರು ಮಾಡಿ ....ಎಸೆದು....ಆ ಮೇಲೆ? ಜವಾಬ್ದಾರಿಯನ್ನು ತಿಳಿದೆವೇ; ಸರಿ....ಇಲ್ಲವಾದರೆ ....ಅಗೋ....ಅವನು....ಯಾರು ? ದೊಡ್ಡ ಪ್ರಾಕಾರದ ಒಳಗಿನ ' ಛಪ್ಪ ' ಕಲ್ಲಿನ ಭಾರಿ ಗೋಡೆಗಳೊಳಗೆ ಗರ್ಭ ಗುಡಿಯಲ್ಲಿ....ಮಲಗಿದಾನೆ ನೋಡು, ಆಜಾನು ಬಾಹು ರಂಗಧಾಮ, ತಲೆದಿಂಬಿಗೆ ' ಪಡಿ ' ಅಲ್ಲ ' ಅಚ್ಛೇರು '

ಇಟ್ಟುಕೊಂಡು....ಅವನೇ ಗತಿ. ಈಗಿನ ಪ್ರಜಾ ಸರ್ಕಾರಕ್ಕೆ ಹೆಗಲು ಕೊಟ್ಟು ಭಾರಾ ಬಿಟ್ಟು ಎತ್ತಿದೆವೇ....ಸರಿ....ಇಲ್ಲವಾದರೆ!....ಪ್ರತಿಯೊಬ್ಬನೂ ತನ್ನ ಕರ್ತವ್ಯವನ್ನು ಪಾಲಿಸಬೇಕು. ರೆಸ್‌ಪಾನ್ಸಿಬಲಿಟಿಗಳು ಬಹಳವಿವೆ. ಅಂತಾ ಲೆಕ್ಚರ ಬುಡೋದು ....ನ, ಸ್ವಭಾವ.

ಮೊನ್ನೆ....ಸಾಯಂಕಾಲ ಬಿಸಿಲಡಗಿದೆ. ಸೂರ್ಯ ಮುಳುಗುತ್ತಾ ಇದ್ದ! ನಿಜವಾಗ್ಲೂ ನಾನು ಸುಳ್ಳು ಹೇಳೊಲ್ಲ. ವಾಯುದೇವ ಆ ಕಡೆ ಯಿಂದ ಈ ಕಡೆಗೆ ಜೋರಾಗಿ, ಸ್ವಲ್ಪ ಹೊತ್ತು ಮೆಲ್ಲಗೆ ಬರ್‍ತಾ ಇದ್ದ. ಅವನು ಬೂಟ್ಸು ಹಾಕಿದ್ದನೋ ಇಲ್ಲವೊ.... ತಿಳಿಯದು....ನಾನು....ಸ್ವತಃ ಪ್ರಗತಿಶೀಲ ಕವಿ ಅವನು....ಯಾರು ? ಅದೇ ಲೆಕ್ಚರ ಹೊಡೆಯುವ ಆಸಾಮಿ....ಪ್ರಕೃತಿಯ ಅಪ್ರಕೃತ ಸನ್ನಿವೇಶಗಳನ್ನು ಅನುಭವಿಸಿ ಸ್ವತಃ ಸಂತೋಷದಲ್ಲಿ ಓಲಾಡಿ ತೇಲಾಡಿ, ನುಣಪಾದ ಕರೀ ರಸ್ತೆಯ ಮೇಲೆ.... ಆಹಾ....ಎಷ್ಟು ಚೆನ್ನಾಗಿದೆ ರಸ್ತೆ....ಅಲ್ಲಿ ಬರುತ್ತಿದ್ದೆವು.

ಹೀಗೇ ಅದು,ಇದು ಮೋಟಾರು ಸಿಕ್ಕಿತು....ಸ್ವಲ್ಪ ಬೆದರಿ ಪಕ್ಕಕ್ಕೆ ಸರಿ ದೆವು. ಕಾರುಗಳೂ, ಸೈಕಲ್ಲುಗಳೂ, ಪಕ್ಕದಲ್ಲೇ ಹರಿದುವು. ಇನ್ನಷ್ಟು ದೂರ ಬಂದೆವು.... ಲೊಟಲೊಟ ಶಬ್ದ ಮಾಡಿಕೊಂಡು....ಒಂದು....ಜಟಕಾ ಬಂತೆ! ಕುದುರೆ ಕೆನೆಯಿತು....ರಸ್ತೆಯ ಅಂಚಿನಲ್ಲೇ ಬಂದೆವು....ಬೇಕಾದಷ್ಟು ಜನ ರನ್ನು ಮೀಟ್ ಮಾಡಿದೆವು....ಆದರೆ ಮಾತಾಡಿಸಲಿಲ್ಲ....ಸರಿ, ಬಾ....ಅಂತಾ ರಟ್ಟೆ ಹಿಡಿದೆಳೆದ ಅವನು....ಸರಿ....ನಂದಭವನದ ಭುವನಕ್ಕೇರಿದೆವು........ ಹತ್ತು ನಿಮಿಷವಾಯಿತು...ಮಸಾಲೆದೋಸೆ ಇಬ್ಬರ ಮುಂದೂ ಒಂದೊಂದು ಕುಳಿತುವು! ಮಿನುಮಿನುಗುವ ಹಾ ಅಂತ....ನಡುಗುತ್ತಾ....ಗಂಗೆಯೂ ಗ್ಲಾಸಿನಲ್ಲಿ ಬಂದಳು! ಸರಿ, ತಿರಸ್ಕರಿಸಲಿಲ್ಲ....ಕ್ಯಾಫೀನ್ ವಿಷದ ಪಾನೀಯ ........ಲೋಟದೊಳಗೊಂದು ಲೋಟದಲ್ಲಿ ತುಂಬಿ ತುಳುಕಾಡಿ ಹೊಗೆ ಯಾಡಿತು. ವಿಷವಾದರೂ, ಸತ್ತರೂ ಪರವಾಗಿಲ್ಲವೆಂತ ಧೈರ್ಯ ಮಾಡಿ ಕುಡಿದೆವು.

ಅಷ್ಟು ಹೊತ್ತಿಗೆ, ಮುಂಡಿಯ ಮೇಲಕ್ಕೆ ಮಡಿಸಿ ದಟ್ಟಿ ಸುತ್ತಿದ್ದ. 'ಹಾಫ್ ಫಾರಂ' ಷರಟವನ್ನು ಧರಿಸಿದ್ದ 'ಅಶೋಕ ಕುಮಾರ' ನಂತಿದ್ದ

ಎಡಗೈಯಲ್ಲಿ ಬಕೆಟ್ಟನ್ನು ಹಿಡಿದು, ಬಲಗೈಲೊಂದು ಹರಕಲು ಬಟ್ಟೆಯೊಂದನ್ನು ಹೊಂದಿ, ಒಂದು ವ್ಯಕ್ತಿ ಬಂದು ನಿಂತಿತು....

ಆಗ.... ನನ್ನ ಪ್ರಿಯ ಗೆಳೆಯ.... ತಕ್ಷಣ.... ಎದ್ದು ಪ್ಲೇಟನ್ನೂ.... ಲೋಟಾಗಳನ್ನೂ ಬಕೆಟ್ ಒಳಗೆ ಹಾಕಿದ....ಗಳಾಸನ್ನು ಮತ್ತೊಬ್ಬ'ತಮ್ಮ' ಬಂದು ತೆಗೆದೊಯ್ದ....ಭುವನದಿಂದ ಭವನದ ಹೊರ ಬಾಗಿಲಿಗೆ ಬಂದು, ನಿಂತು, ತುಂಬು ಮೀಸೆಯನ್ನು ತಿರುವುತ್ತಿದ್ದ, ಧನಲಕ್ಷ್ಮಿಯ ಪೀಠವನ್ನು ಲಂಕರಿಸಿದ್ದ ಆ....ವ್ಯಕ್ತಿಗೆ ಪರ್ಸಿನಿಂದ ಒಂದು ಚೂರು....ಕಾಗದ(?)ವನ್ನು ತೆಗೆದುಕೊಟ್ಟು ಕೇವಲ ಕೆಲವೇ ಹಿತ್ತಾಳೆ ಮತ್ತು ತಾಮ್ರದ ಅದೂ ತೂತು ಚೂರುಗಳನ್ನು ವಾಪಸು ಪಡೆದು ಮುಂದಡಿಯಿಟ್ಟೆವು.... ಮಾರ್ಕೆಟ್ಟಿಗೆ ನುಗ್ಗಿದೆವು....ಹಣ್ಣಿನಂಗಡಿಯ ಸಾಲಿಗೆ ಬಂದು ಕಂಬಕ್ಕೆ ತಗುಲಿಸಿದ್ದ ಒಂದು ಬೋರ್ಡ್ ಕಣ್ಣಿಗೆ ಬಿತ್ತು.

'ಹಣ್ಣಿನ ಸಿಪ್ಪೆಯನ್ನು ತೊಟ್ಟಿಯಲ್ಲಿ ಹಾಕಿ' ಅಂತ, ಅದರಲ್ಲಿತ್ತು. ಅಲ್ಲೇ ಒಂದು ತೊಟ್ಟಿಯೂ ಇತ್ತು. ಕೂಡಲೆ, ಆವನು ಒಂದಾಣೆ ಕೊಟ್ಟು ಒಂದು ಕಿತ್ತಳೇ ಫಲವನ್ನು ಕೊಂಡು, ಸಿಪ್ಪೆ ಸುಲಿದು ನನಗರ್ಧ ನುಂಗಿಸಿ, ತಾನು ಮಿಕ್ಕಿದನ್ನು ನುಂಗಿ ಸಿಪ್ಪೆಯನ್ನು ತೊಟ್ಟಿಯಲ್ಲಿ ಹಾಕಿದ.

ಹುಂ....ಅಂ.... ಮುಂದಡಿಯಿಟ್ಟೆವು.... ಅಲ್ಲೊಂದು ಬೋರ್ಡ್.... ಮತ್ತೊಂದು ಕಂಬದ ಮೇಲೆ ನೇತಾಡುತ್ತಿತ್ತು....ಪಾಪ ಎಷ್ಟು ದಿವಸದಿಂದ ಒಂದೇ ಸಮನೆ ಹಾಗೆ ತೂಗಾಡುತ್ತಿದೆಯೋ....ಮುನಿಸಿಪಾಲಿಟಿಯವರಿಗೇ ಗೊತ್ತು....ಉಹುಂ.... ಅವರಿಗೂ ಗೊತ್ತಿಲ್ಲ....ಮರೆತಿರಬೇಕು.... "ಈ ಕೊಟ್ಟೆಯೊಳಗೇ ಉಗುಳಿ" ಸರಿ....ಅಲ್ಲೇ ಒಂದು ತೊಟ್ಟಿ....ತಕ್ಷಣ ನನ್ನ ಗೆಳೆಯ ಕ್ಯಾಕರಿಸಿ ಉಗುಳಿದ! ಆವನ ಸ್ವಾತಂತ್ರ್ಯಕ್ಕೆ ನಾನು ಖಂಡಿತ ಅಡ್ಡ ಬರಲಿಲ್ಲ!

ಆವನಂದ.... ಲೋ ಸುಬ್ಬಾ....ಏನಮ್ಮಾ ನಾವು....ಅಂ.... ನಮ್ಮ ರೆಸ್‌ಪಾನ್ಸಿಬಲಿಟಿಗಳನ್ನು ರಿಯಲೈಸ್ ಮಾಡಿಕೊಳ್ಳದೇ ಹೋದರೆ?.... ಅಂದ....ಹೌದು, ಹೌದು, ಯಸ್ಸೆಸ್ ಎಂದು.... ಕತ್ತಲ್ಲಾಡಿಸಿ, ಆವನ ಹೆಗ್ಗತ್ತ....ಮೇಲೆ ಕೈಚಾಚಿ, ಭೇಷ್ ಎಂದು ಚಪ್ಪರಿಸಿ ಭುಜಕಟ್ಟಿ "ಬಾಲು" ನನ್ನು ಬೀಳ್ಕೊಟ್ಟೆ.

ಜವಾಬ್ದಾರಿಯೆಂದರೆ ಇದೇ ಅಲ್ಲವೇ?

# ಚೆನ್ನಿಲ್ಲಾಂದ್ರೆ

"ಅವನ ಮುಖದ ನೀರಿಳಿಸಿ ಬಿಟ್ಟಿ. ಅವನು ಕತ್ತು ಎತ್ತದ ಹಾಗೆ ಮಾಡಿಬಿಟ್ಟಿ. ನನ್ನ ಮುಖ ಕಂಡರೆ ಅವನು ಹ್ಯಾಗೆ ಹಿಂತಿರುಗಿ ಸಂಧಿ ಗೊಂದಿಗಳ ದಾರಿ ಹುಡುಕುತ್ತಾನೆ !" ಅಂತೀರಲ್ಲಾ, ಪಾಪ.... ಅವನೇನು ಅಂಥಾ ತಪ್ಪು ಮಾಡಿರುವುದು? ನಿಮಗೇನು ಹಣ ಸಾಲ ಕೊಡಬೇಕೆ ? ಆಡಿದ ಮಾತಿಗೆ ತಪ್ಪಿದನೆ? ನಿಮ್ಮ ಮನೆಯ ಮಾಲನ್ನೇನಾದರೂ ಅಪಹರಿಸಿದನೇ? ನಿಮ್ಮ ಮಗಳನ್ನು ಮದುವೆ ಆಗುತ್ತೀನಿ ಅಂತ 'ಚಕ್ಕರ್' ಕೊಟ್ಟು ಪ್ರೇಮಾಘಾತ ಮಾಡಿದನೆ ? ಛೆ....ಪಾಪ ಆ ರಾಜು.... ಬೊಜ್ಜಾಗಿರುವುದೇ ಕಾರಣವಲ್ಲವೆ? ಅಷ್ಟು ಮಾತ್ರಕ್ಕೆ ಆ ರೀತಿ ಹಂಗಿಸುವುದೇ ?.... ಅವನೋ " ಅಯ್ಯೋ....ಅವರು ಅನ್ನದೆ ಇನ್ಯಾರು ಅಂತಾರೆ....' ಬೊಜ್ಜ ' ಅಂದರೆ ಅಂದರು " ಅಂತಾ ಹಲ್ಲು ಕಿರೀತಾನೆ!....ಛೆ ಇದು ಚೆನ್ನಿಲ್ಲಾಂದ್ರೆ ....ತೀರ ಕಿಲಾಡಿಗಳು ನೀವು ! ಕೆಲವು ಸಮಯದಲ್ಲಿ ಕಾದುಕೊಂಡಿದ್ದು ಮಾನ ಕಳೀತೀರಿ! ಕಂಡ ಕಂಡವರನ್ನೆಲ್ಲಾ ರೇಗಿಸುವುದೇನು ಚೆನ್ನ ? ಮೊನ್ನೆ ಮುಂದುಗಡೆ ಮನೆ "ಶ್ಯಾಮಲ" ನ್ನ 'ಟಾರಿನಲ್ಲಿ ಇದ್ದಿಲನ್ನು ತೇದು ಲೇಪಿಸಿದಂತೆ ಶೋಭಿಸ-ತ್ತಿದೆ, ನಿನ್ನ ಮುಖದ ಕಾಂತಿ!' ಅಂದು ಬಿಟ್ರಿ.... ಅವರಮ್ಮನ ಕೂಡ ಅವಳು ಅಳುತ್ತಾ ಹೇಳಿದಳಂತೆ....'ಅಯ್ಯೋ....ಅವರು ತಾನೆ....ಗೇಲಿ ಮಾಡ್ತಾರೆ....ಸುಮ್ಮನಿರಮ್ಮಾ' ಅಂದರಂತೆ! ಆ ಗೌರಮ್ಮನವರ ಮಗಳು 'ಪಂಕಜ' ನ್ನ " ತೆಳ್ಳಗೆ ಬೆಳ್ಳಗೆ ಕನ್‌ಸಪ್‌ಷನ್ ಪೇಷಂಟು ಇದ್ದಹಾಗೆ ಇದ್ದಾಳೆ" ಅಂತ ಮುಖ ಮುರಿದಿರಿ. ಅವಳು ಅವತ್ತಿನಿಂದ ಸಿಟ್ಟುಮಾಡಿಕೊಂಡು ನಮ್ಮ ಮನೇ ಕಡೆಗೆ ತಲೆ ಹಾಕಿಲ್ಲ....ಆಕೋ ಬಂದಳು !....ಓಹೋ....ನೀವು ಇದಾರೆ ಅಂತ ತಿಳಿದುಕೊಂಡು ಹಿಂದಕ್ಕೆ ಹೋದಳು ! ' ಬಸ್ಸು ಬಂತು ಬಸ್ಸು ' ಉಸ್ ಎಂದು ಆರಾಮು ಕುರ್ಚಿಯ ಮೇಲೆ ಕೂತು ನನ್ನ ಹೆದರಿಸಿ. .ನಾನು ಬಾಗಿಲಲ್ಲಿ ಹಣಿಕಿ ನೋಡಿದರೆ ಧೊಂಡೂಬಾಯಿ ಧಾವಿಸಿ ಬರ್ತಾ ಇದ್ರು !

"ಅಲ್ಲ್ರಿ, ಮಾವನ ಮನೇಲಿ ಮಕ್ಕಳು ಮರಿ ಇಟ್ಕೊಂಡಿರೋ....ಆ ಇಸಮು ಆ ನಾಗರಾಜನ್ನ "ನೀನೇ ವಾಸಿ, ಒಬ್ಬರ ಹಂಗಿಲ್ಲ, ಹವ್ಯಾಸವಿಲ್ಲ, ಇಂಡಿಪೆಂಡೆಂಟ್ಟು," ಅಂತೀರಲ್ಲಾ! ಅವನು ಪಾಪ....ಹುಸಿನಗೆ ನಗ್ತಾನೆ! ನಮ್ಮ ಅಣ್ಣ ರಾಜನ ಹತ್ತಿರ ದುಡ್ಡಿಲ್ಲ ಅಂತ ತಿಳಿದು "ಒಂದೈವತ್ತು ರೂಪಾಯಿ ಸಾಲ ಕೊಡಯ್ಯಾ!" ಎಂದು ಕೇಳ್ತೀರಿ! ಪಾಪ ಮನೆ ಮೇಷ್ಟ್ರು ....ಅದೇ ನಮ್ಮ ಮರಿಯ ಮೇಷ್ಟ್ರು ಅಚ್ಚುಗಟ್ಟಾಗಿ ೩ ನಾಮ ಹಾಕಿಕೊಂಡು ಬಂದರೆ ಮರೀಗೆ ಪಾಠ ಹೇಳ್ಕೊಡುತ್ತಾ ಇರೋವಾಗ "ಲೋ ಮರಿ, ವೆಂಕಟರಮಣಸ್ವಾಮಿ ಪಾದಕ್ಕೆ ಗೋವಿಂದಾ ಅಂತಾ ಅಂದಿಯ?" ಅಂತೀರಿ!

"ಪಕ್ಕದ ಮನೆ ಮೋತೀಖಾನೆ ರೈಟರ್ ಮಗು ಆಟವಾಡ್ತಾ ಇದ್ರೆ ....ಅದನ್ನು ಮೋತಿಖಾನೆ ಹೆಗ್ಗಣ ಅನ್ನೋದು! 'ಬಾ ಬಾ ಗುಬ್ಬಿಮರಿ ತಂದಿರುವೆ ಕಡ್ಲೆ-ಪುರಿ' ಅಂತಾ ಆ ಪುಟ್ಟ ಹೆಣ್ಣು ಮಕ್ಕಳು ಆಟವಾಡ್ತಾ ಇದ್ರೆ, 'ಗುಬ್ಬಿ ನಂಗೆ ಕಡ್ಲೆಪುರಿ ಕೊಡು' ಅಂತ ಅವುಗಳನ್ನ ಕಿರ್ರೋ ಅನ್ನಿಸೋದು! 'ನಮ್ಮ ಚಿಕ್ಕಮ್ಮನ ಮಗಳು 'ಸೀತೆಗೆ' ಮದುವೆಯಾಯ್ತು' ಅಂತ ಸಂತೋಷದ ಸುದ್ದಿ ಹೇಳಿದ್ರೆ 'ವನವಾಸ ಕಾಣದೆ ಇಲ್ಲಿ' ಅಂತ ಹರಸಿದಿರಿ! 'ನಿಮ್ಮ ಆಫೀಸರು ರಾಜಾರಾಯರ ಮಗಳು 'ಶಕುಂತಲ'ನಿಗೆ ಮದುವೆ ನಿಷ್ಕರ್ಷೆಯಾಯಿತೆ?'....ಅಂದರೆ....'ದುಷ್ಯಂತ ಸಿಕ್ಕುವುದು ಸುಲಭವೇ?' ಎಂದು ಪ್ರಶ್ನಿಸುತ್ತೀರಿ!

"ಇದೆಲ್ಲಾ ಹೋಗಲಿ, ನನ್ನ ತಮ್ಮ ಸಂಧ್ಯಾವಂದನೆ ಮಾಡ್ತಾ 'ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ' ಅಂತ ಹೇಳಿದ್ರೆ 'ಶಿವ ವಿಷ್ಣುವಿಗೆ ಒಂದು ರೂಪಾಯಿ ಕೊಡಬೇಕಾಗಿತ್ತಂತೆ, ವಿಷ್ಣು ಶಿವನಿಗೊಂದು ರೂಪಾಯಿ ಕೊಡಬೇಕಾಗಿತ್ತಂತೆ. ಸಾಕು ತೆಗೆಯೋ.... ದೇವರ ಜಗಳದಲ್ಲಿ ನೀನ್ಯಾಕೆ ಇಂಟರ್‌ಫಿಯರ್ ಆಗಬೇಕು....ಏಳು ಏಳು!' ಅಂತ ಅವನನ್ನ ರೇಗಿಸಿದಿರಿ! ನನ್ನಂತೂ ಸಾವಿರದೆಂಟು ಸಾರಿ ಅಪಹಾಸ್ಯ ಮಾಡ್ತೀರಿ. ಕತ್ತು ಉದ್ದವಾಗಿರೋ ಹೊತ್ಗೆ 'ಒಂಟಿ ಕತ್ತು' ಅಂತೀರಿ, ನಿಶ್ಶಕ್ತಿಗೆ ಕೈಕಾಲು ಸಣ್ಣಗಿರೋದರಿಂದ 'ಕೋಳೀ ಕಾಲು' 'ಕಣ್ಣು ಮಾಲಾಗಿದ್ದರೆ ಪುಣ್ಯವಂತೆ' ಅಂತಾರೆ....ನೀವು.... 'ಒಂದು ಕಣ್ಣು ಆಕಾಶ

....ಇನ್ನೊಂದು ಭೂಮಿ.... ಹೀಗೆ ಪ್ರಪಂಚವನ್ನೆಲ್ಲಾ ವೀಕ್ಷಿಸುತ್ತಿವೆ' ಎಂದು ಹಂಗಿಸುತ್ತೀರಿ! ಪೂರ್ವಕಾಲದ ನಮ್ಮ ತಂದೆಯವರು ನೆತ್ತಿಯ ಮೇಲೆ ನಾಲ್ಕು ಕೂದಲು ಬಿಟ್ಟಿದ್ದರೆ.... 'ನಾಲ್ಕು ಕೂದಲೂ.... ಗಾಳಿ ಯಾವ ಯಾವ ದಿಕ್ಕಿಗೆ ಬೀಸುತ್ತಿದೆ ಎಂಬುದನ್ನು ಸೂಚಿಸುತ್ತವೆ' ಎನ್ನುತ್ತೀರಿ! ಹೀಗೆ....ನೀವು ಸಿಕ್ಕಿದವರನ್ನೆಲ್ಲಾ ಆಡಿಕೊಳ್ಳೋಕೆ ಪ್ರಾರಂಭಿಸಿದರೆ.... ತಥ್ ಚೆನ್ನಿಲ್ಲಾಂದ್ರೆ! ಅಲ್ಲಾ, ಅವತ್ತು ಪೇಪರಿನಲ್ಲಿ ........ರು ನಿಧನರಾದರು, ಅಂತ ಓದಿದರೆ....ಅ.... 'ಛೆ ಛೆ ಗೋತ ಹೊಡೆದದ್ದು ಪರಮ ಅನ್ಯಾಯ' ಅಂತೀರಲ್ಲಾ.... ಅಲ್ಲಾ ನಾನು ಸತ್ತರೂ.... ನೀವು ನಗ್ತಾ ನಗ್ತಾ ಇರ್ತೀರಾ?"

# ಲಕ್ಷ್ಮೀ ಪುತ್ರ

ಎಲ್ಲರೂ ನನ್ನನ್ನು ಲಕ್ಷ್ಮೀಪುತ್ರನೆನ್ನುವರೇ....ಭಲೇ....ಭೇಷ್.... ಹೆಬ್ಬಿ ಗುಬ್ಬಾಲಿ, ಯಾವನೊಬ್ಬನಾದರೂ ಕಾರಿಡುವ ಹಾಗಾದನಲ್ಲಾ, ಮೈಸೂರಿನಲ್ಲಿ ಸ್ವಂತ ಮನೆ ಮಾಡಿಕೊಂಡನಲ್ಲಾ, ಅಂತ. ನನ್ನ ಕಮಲು ವೀಣೆ ಕಲಿಯಬೇಕು ಅಂದಳು, ವೀಣೆ ತಂದೆ; ಸಿಲ್ಕು ಸೀರೆ ಬಯಸಿದಳು, ತಕ್ಷಣ ಧರ್ಮವಿಲಾಸದಿಂದ ತಂದೆ; ಕೈಗೆ ಬಂಗಾರದ ಬಳೆ ತೊಡಿಸಿದೆ; ಕೊರಳಿಗೆ ಕಂಠೀ ಹಾರ ಹಾಕಿದೆ. ನಾನೂ ಕೈಗೆ ವೆಸ್ಟ್ ಎಂಡ್ ರಿಸ್ಟ್ ವಾಚ್ ಕಟ್ಟಿದೆ; ಉಲ್ಲನ್ ಸೂಟ್ ಧರಿಸಿದೆ; ರೇಡಿಯೋ ತಂದೆ; ಎಲ್ಲರೂ ನನ್ನನ್ನು ಲಕ್ಕಿ ಎನ್ನುವವರೇ. ಅಷ್ಟು ನಿಯತ್ತಿನಿಂದ ಬದುಕುತ್ತಿದ್ದೇನೆ ಅನ್ನಿ: ನಾನು ಊಟಮಾಡುವುದು ಬೆಳ್ಳಿ ತಟ್ಟೆಯಲ್ಲಿ; ಕಾಫಿ ಕುಡಿಯುವುದೂ ಬೆಳ್ಳಿ ಲೋಟದಲ್ಲೇ! ಅಂತೂ ಇಂತೂ ನಮ್ಮೂರಿನವರು ಹೊಗಳಿದರು; ನನ್ನ ಸೋದರಮಾವ ಹಾಗೂ ಹೆಣ್ಣು ಕೊಟ್ಟ ಮಾವನವರಂತೂ ....'ವಾಹವ್ವಾ' ಅಂದರು. ಇಷ್ಟೆಲ್ಲಾ ಆದರೂ....೫-೬ ವರುಷದಿಂದ ನಮ್ಮ ದಾಂಪತ್ಯದಲ್ಲಿ ಸುಖವಿರಲಿಲ್ಲ. ಈಗ ೩ ವರ್ಷದ 'ರಾಜ' ಕಾಂಪೌಂಡಿನಲ್ಲೆಲ್ಲಾ ಓಡಾಡುತ್ತಾನೆ ಅನ್ನಿ. ನನ್ನ ಮಾವ ನನ್ನ ಮನೆಗೆ ಬಂದು ೨ ವರ್ಷವಾಗಿತ್ತು. ಇಷ್ಟು ಅದ್ದೂರಿಯಾಗಿ ಬದುಕುತ್ತಿರುವ ನನ್ನ ಮಗಳು, ಅಳಿಯನನ್ನು ನೋಡಬೇಕೆನಿಸಿತೇನೋ !....ಆ ನಮ್ಮ ತಂದೆ ತಾಯಿ ಬದುಕಿದ್ದಿದ್ದರೆ ಅದೆಷ್ಟು ಖುಷಿಪಡುತ್ತಿದ್ದರೋ ! ಹುಂ....ಅವರಿಗೇ ಅದೃಷ್ಟವಿಲ್ಲ ! ಮೊನ್ನೆ....ನಮ್ಮ ಮಾವನವರೂ ಬಂದರು. ನಮ್ಮ ಮನೆ ಆಳು 'ಕೆಂಪ' ರಾಜೂನ ಪೆರಾಂಬುಲೇಟರಿನಲ್ಲಿ ತಳ್ಳಿಕೊಂಡು ಕಾಂಪೌಂಡಿನೊಳಗೇ ಆಟವಾಡಿಸುತ್ತಿದ್ದ. ಕಾಂಪೌಂಡೊಳಗೆ ಕಾಲಿಡುತ್ತಲೇ ಬಲು ಖುಷಿಯಾಯಿತು. ಮೀಸೆಯ ಮರೆಯಲ್ಲೇ ನಕ್ಕರು.

ಕಮಲು ಕಾಫಿ ಮಾಡಿ ಕೊಟ್ಟಳು. ಸರಿ....ಭಾನುವಾರ, ಅಂಗಡೀಗೆ ರಜಾ....ಜೊತೆಯಲ್ಲೇ ಊಟ ಮಾಡಿದೆವು. ಮಾವನವರನ್ನೂ 'ದ್ರೋಹಿ'

ಚಿತ್ರಕ್ಕೆ ಕರೆದುಕೊಂಡು ಹೋದೆ; ಮ್ಯಾಟಿನೀಗೆ ಹೋಗಿದ್ದುದರಿಂದ ಬೇಗಲೇ ಮನೆಗೆ ಬಂದೆವು. ರಾತ್ರಿ ಊಟಮಾಡಿ ಎಲಡಿಕೆ ಜಗಿಯುತ್ತಾ

"ಪರವಾಯಿಲ್ಲಪ್ಪಾ.... ಬಲು ಸಂತೋಷ....ನಿನ್ನ ಸಂಸಾರ ನೋಡಿ ಬಲು ಸಂತೋಷವಾಯ್ತು. ಇಷ್ಟರ ಮಟ್ಟಿಗೆ ಆದೆಯಲ್ಲ....ಅಯ್ಯೋ.... ಚಿಕ್ಕಂದಿನಲ್ಲಿ ತಂದೆ ತಾಯಿ ಕಳೆದುಕೊಂಡರೂ....ಏನೋ ೪ ಅಕ್ಷರ ಕಲಿಸಿದ್ದಕ್ಕೆ.... ಬುದ್ಧಿವಂತನಾಗಿ ಬಾಳುತ್ತಿದ್ದೀಯಲ್ಲಪ್ಪ........ಈ ಮನೇಗೆಷ್ಟು ಬಿತ್ತು ?........"

"೫ ಸಾವಿರ....ಮಾವಯ್ಯ."

"ಕಾರಿಗೆ....?"

"ಅದೂ ಬಹಳ ಚೀಪು ಮಾವಯ್ಯ.'ಮೂರು.' ಸೆಕೆಂಡ್ ಹ್ಯಾಂಡ."

"ಆಗ್ಲಿ....ಅದಕ್ಕೇನಂತೆ ! ರೇಡಿಯೋ ?"

"ಅದು ನನ್ನ ಫ್ರೆಂಡ್....ನನ್ನ ಅಂಗಡಿ ಪಾರ್ಟನರ್ ಇದಾನಲ್ಲ.... ಅವನ Friend ಕೊಂಡುಕೊಂಡಿದ್ದರು. ಅವರಿಂದ ನನಗೆ ಸುಲಭಕ್ಕೇ ಸಿಕ್ತು....ನನಗೆ ೨೦೦ ಬಿತ್ತು ಅಷ್ಟೆ."

"ಪರವಾಗಿಲ್ಲ, ಹಾಗಾದ್ರೆ ಬಿಸಿನೆಸ್ಸು ಚೆನ್ನಾಗಿ ಆಗಿದೇಂತಾಯ್ತಲ್ಲ !"

"ಏನಿಲ್ಲ ಮಾವಯ್ಯ....ಬಹಳ ರಿಸ್ಕು, ಏನು ಬಿಸಿನೆಸ್ಸೋ ಏನೋ.... ಮುಳುಗಿಹೋಗೋ........ಸಂದರ್ಭ.... ದಿನದಿನಕ್ಕೆ ಈ ರೀತಿ ರೇಟ್ಸು ಏರಿಯಾಗ್ತಾ ಇದೆ....ಹೇಗೆ....ಮನಿ ಇನ್ವೆಸ್ಟ್ ಮಾಡೋದು ?"

"ಮತ್ತೆ ಬಿಸಿನೆಸ್ಸು ಚೆನ್ನಾಗಿಲ್ದೇ....ಇಷ್ಟೊಂದು ವಹಿವಾಟು ನಡೆಸುತ್ತಿದೀಯಾ ?"

"ಎಲ್ಲಾ....ಇನ್ ಸ್ಟಾಲ್‌ಮೆಂಟು ಬೇಸಿಸ್ ಮಾವಯ್ಯ!"

"ಸರಿ....ಸರಿ—ಮನೆ, ಕಾರು, ರೇಡಿಯೋ, ಎಲ್ಲಾ!"

"ಹುಂ, ಮಾವಯ್ಯ, ಜವಳಿ, ಒಡವೆ, ದಿನಸಿ ಅಂಗಡೀಲಿ ಕೂಡ, ಕಂತಿನ ಬೇಸಿಸ್ಸು !"

"ಅಲ್ಲಪ್ಪಾ! ಹೀಗಾದ್ರೆ ಹೇಗೆ....ಸುಮ್ನೆ ಹುಡುಗಾಟವಾಯ್ತೆ ? ತಿಂಗಳಿಗೆ—ಆದಾಯವೆಷ್ಟಿದೆಯಪ್ಪಾ....ನಿನ್ನ ಅಂಗಡೀಲಿ?"

"ನನ್ನ ಪಾಲಿಗೆ ೧೦೦ ರೂಪಾಯಿಂದ ೧೫೦ ರ ವರೆವಿಗೆ ಸಿಕ್ಕುತ್ತೆ."

"ತಿಂಗಳಿಗೆ....ಕಂತು ಎಷ್ಟು ಕಟ್ಟಬೇಕಾಗುತ್ತೆ ?"

"೧೦೦, ೧೫೦ ರ ಹತ್ತಿರ....ಬರುತ್ತೆ. ಮತ್ತೆ ಸಂಸಾರ ತಾಪತ್ರಯ, ಮನೆ ಮ್ಯಾನೇಜ್‌ಮೆಂಟು, ಬ್ಯಾಂಕು, ಸೊಸೈಟಿ— ಇದೆಯಲ್ಲಾ ಮಾವಯ್ಯ ! ಮಂತ್ಲಿ ಇನ್‌ಸ್ಟಾಲ್‌ಮೆಂಟಿನ ನಗದು ಹಣಕ್ಕಿಂತ ಸ್ವಲ್ಪ ಹೆಚ್ಚಾಗಿ ಕಂತಿನವರಿಗೆ ಕೊಡಬೇಕೋ ಏನೋ ಹಾಗೂ ಹೀಗೂ ಮ್ಯಾನೇಜ್ ಮಾಡ್ತಿದೀನಿ."

"ನೋಡು, ಹೀಗಾದ್ರೆ ಬಲು ಕಷ್ಟ. ನಿನಗೆ ತಿಳುವಳಿಕೆ ಸಾಲದು. ನಿನ್ನ ಸ್ವಂತ ಅಂತ ಯಾವ ಪದಾರ್ಥ ಇದ್ದ ಹಾಗಾಯ್ತು ? ಯಾವುದಾದರೂ ಒಂದು ಪದಾರ್ಥದ ಕಂತನ್ನಾದರೂ ತೀರಿಸಿ 'ಇದು ನಂದು' ಅಂದ್ಕೊ. ಇಷ್ಟೆಲ್ಲಾ ಯಾಕೆ ದೊಡ್ಡಿಸ್ತಿಕೆ ? ಪಾದಕ್ಕೆ ತಕ್ಕಹಾಗೆ ಎಕ್ಕಡ ಹೊಲ್ಸಿಕೋಬೇಕು. ' ಒಂದಿಷ್ಟು ಕೊಡೋಣ ' ಅನ್ನೋಕೆ ನನ್ನ ತಲ್ಲೆ ತಾಪತ್ರಯಗಳೇ ನೂರೆಂಟು! ನಿನ್ನ ಒಳ್ಳೇದಕ್ಕೆ ನಾನು ಹೇಳೋದು ! ಏನು ಹೇಳೋರು ಕೇಳೋರು ಯಾರೂ ಇಲ್ಲವೆ ? ಇವತ್ತು ನಿಮ್ಗೆ ಹುಡ್ಗಾಟ ! ಯಾವ ಗ್ಯಾರಂಟೀ ಮೇಲೆ ಇಷ್ಟೊಂದು ವಹಿವಾಟು ?

"ಲೇ ಕಮಲು, ನೀನಾದರೂ ಒಂದಿಷ್ಟು ಗಂಡನಿಗೆ ಬುದ್ಧಿ ಹೇಳ್ಬೇಡ್ವೆ! ಲೋ....ಕಿಟ್ಟು, ಇನ್ಮೇಲಾದ್ರು ಬುದ್ಧಿ ಕಲತ್ಕೊ. ಒಟ್ಟಿಗೆ ಮಹಡಿ ಮನೆ ಕಟ್ಟೆ ಚಿನ್ನದ ಗೋಪುರ ಹಾಕೋಕ್ಕೆ ಹೋಗಬೇಡ."

" ಇಲ್ಲ ಮಾವಯ್ಯ. "

ಮಾರನೆಯ ದಿನ ಬೆಳಗ್ಗೆ ಮಾವನವರು "ಸರಿ....ನಾ ಬರ್ತೀನಪ್ಪಾ " ಅಂದರು.

"ಕಾರು ಕೆಟ್ಟುಹೋಗಿದೆ........ಸ್ಟೇಷನ್ನಿಗೆ ಕರೆತಂದು ಬಿಡಬಹುದಾಗಿತ್ತು" ಅಂದೆ.

"ಏನೂ ಪರವಾಗಿಲ್ಲ. ಸಿಟಿ ಬಸ್ ಇದೆಯಲ್ಲ ! ರಾಜು ಎಲ್ಲಿ?"

"ಲೋ....ಕೆಂಪಾ...." ಅಂದೆ.

ಕೆಂಪ ರಾಜನನ್ನು ಕರೆದುಕೊಂಡು ಬಂದ. ನೋಡು ಮರಿ, ಅಜ್ಜಾ ಕೂಗ್ತಾಗೆ—ಎಂದು ರಾಜೂವಿಗೆ ಹೇಳ್ದೆ.

ಮಾವಯ್ಯ.... "ಬಾ ಮರಿ".... ಅಂತಾ ರಾಜುವನ್ನೆತ್ತಿಕೊಂಡು ಮುತ್ತಿಟ್ಟು ಕೈಯಲ್ಲಿ ೧೦ ರೂಪಾಯಿನ ಒಂದು ನೋಟನ್ನಿಟ್ಟರು. "ಬರ್ತೀ ನಮ್ಮ ಕಮಲು....ನಾನ್ಹೇಳಿದ್ದ ಜ್ಞಾಪಕವಿರಲಿ.... ಹುಷಾರಾಗಿ ಸಂಸಾರ ಮಾಡಿಕೊಂಡು ಹೋಗಿ."

ಮಾವಯ್ಯನೊಡನೆ ಸ್ಟೇಷನ್ನಿಗೆ ಹೋದೆ.

"ಲೋ....ಕೆಂಪಾ....ನೋಡು ಡಾಕ್ಟರು.... ಶಿವಗ್ಲೋರಿಗೆ ಈ ೧೦ ರೂಪಾಯಿ 'ನಾನು ಕೊಟ್ಬಿಟ್ಟು ಬಾ ಅಂತ್ಹೇಳಿದ್ರು ಅಂತ' ಕೊಟ್ಬಿಟ್ಟು ಬಾ!"

"ಹುಂ....ತಾಯಿ...."

ಸ್ಟೇಷನಿನಿಂದ ಮಾವನವರನ್ನು ರೈಲಿಗೆ ಹತ್ತಿಸಿ ಮನೆಗೆ ಬಂದೆ. "ಕಮಲು, ಎಲ್ಲಿ ಆ ೧೦ರೂಪಾಯಿ?....ಸಧ್ಯ....ಮೊನ್ನೆಯಿಂದ ಆ ಶೆಟ್ಟಿ ನಿನ್ನ ಬಳೇಕಡೆ ದುಡ್ಡನ್ನು ಕೇಳ್ತಾ ಇದ್ದಾನೆ....ಮೊದಲು ಇವತ್ತು ಬಿಸ್ಹಾಕಿ ಬಿಡ ಬೇಕು. ಸಧ್ಯಕ್ಕೆ ಅದೊಂದು ಗಂಡಾಂತರವಾದರೂ ಕಳೀಲಿ."

"ಇಲ್ಲಾಂದ್ರೆ. ನಾನು ಅದನ್ನು ಡಾಕ್ಟರಿಗೆ....ಕಳುಹಿಸಿ ಕೊಟ್ಬಿಟ್ಟೆ!"

"ಅಯ್ಯೋ! ಛೆ ಎಂಥಾ ಕೆಲ್ಸನೆಸೀ ಮಾಡೋದು ! ಹೇಳ್ದೆ ಕೇಳ್ದೆ.... ಏನೋ ಅಧಿಕಪ್ರಸಂಗಿತನ ಮಾಡೋದು !"

"ಸರಿ....ಸಾಕು ಸಧ್ಯ....ಸುಮ್ಮನಿರೀಂದ್ರೆ....ಅಣ್ಣಾ ಹೇಳಿದ ಹಾಗೆ ನಮ್ಗೂಂತ ಒಂದೂ ಇಲ್ಲ; ಮಗೂಗೆ ಔಷ್ತಿಕೊಡಿಸಿದ್ದು, ಟಾನಿಕ್ಕು ತಂದಿದ್ದು ಈಗೆರಡು ತಿಂಗಳಿಂದ ೧೫ ರೂಪಾಯಿ ಆಗಿತ್ತು. ೧೦ ರೂಪಾಯಿ ಕಳಿಸಿದ್ದೀನಿ ನಾಳೆ ಮೊದಲು ಏನಾದರೂ ಮಾಡಿ ಇನ್ನು ೫ ರೂಪಾಯಿ ಯನ್ನು ಡಾಕ್ಟರಿಗೆ ಕೊಟ್ಬಿಬಿಡಿ.... ಮಗುವಾದರೂ ಮೊದಲು ನಮ್ಗೂಂತಾಗಲಿ !" ಅಂದಳು.

ಪಿಳಪಿಳನೆ ಕಣ್ಣು ಬಿಡುತ್ತಾ ತರ್ಜನಿಯಿಂದ ತಲೆ ಕೆರೆಯುತ್ತ ಆರಾಮು ಕುರ್ಚಿಯ ಮೇಲೆ ಕುಳಿತೆ. ರಾಜು ಧೊಪ್ಪೆಂತ ಬಂದು ಮೈ ಮೇಲೆ ಬಿದ್ದ.

# ಪುರುಸೊತ್ತಿಲ್ಲಾಂದ್ರೆ

[ ಕೋಟ್ಯಾಧೀಶ್ವರರ ಮನೆಯಲ್ಲಿ ಕಾಫಿ ಸಿಕ್ಕೀತೇ ?

ಆಳುಗಳನ್ನು ಆಳುವ ಆಸೆ ಸೀತಮ್ಮನಿಗೆ; ಮಕ್ಕಳ ಕೈಗೆ ಕೋಡಬಳೆ ಕೊಟ್ಟು ಕಾಫಿ ಕುಡಿಸುವ ಕರುಣೆ ಕಮಲಮ್ಮನಿಗೆ.

ಕಮಲಮ್ಮನ 'ಕಾಮನ್ಸೆನ್ಸಿ'ಗೂ ಸೀತಮ್ಮನ 'ಸಿರಿ'ಗೂ ಅಣ್ಣ ಹೊಣೆಯೇ ? ]

ಹೋಗ್ಬೇಕು, ಅಯ್ಯೋ, ವಿಪರೀತ ಕೆಲಸವಿದೆ; ಗುಡ್ಡೆ ಹಾಗೆ ಕೂತಿದೆ ಕೆಲಸ. ನಲ್ಲೀಲಿ ನೀರು ಬರೋ ಹೊತ್ತಾಯ್ತು. ನಾಲ್ಕು ಗಂಟೇಗೆ ಬಿಡ್ತಾರೆ; ೫ ಗಂಟೆಗೆ ನಿಂತುಹೋಗುತ್ತೆ. ಹಂಡೇಗೆ ನೀರು ತುಂಬಬೇಕು. ಅಡಿಗೇಗೆ ಕುಡಿಯೋಕೆ ನೀರು ತಂದಿಡಬೇಕು. ಒಕ್ಕಲಗಿತ್ತಿ ಮುಸುರೆ ತೊಳೆಯೋಕೆ ಬರೋ ಹೊತ್ತಾಯ್ತು. ಒಗೆದ ಬಟ್ಟೆ ಹಿಂಡಿ ಹರಡಬೇಕು. ಮಗು ಒಂದು ನಿಮಿಷ ಕ್ಕೆ ಬಿಡುಲ್ಲಾಂದ್ರೆ. ಬಲೇ ರಗಳೆ. ೨೪ ಗಂಟೆಯೂ ಕಂಕುಳು ಬಿಟ್ಟು ಅಲ್ಲಾಡೊಲ್ಲ. ತಥ್ ಬೇಜಾರಾಗಿದೆ. ಏನ್ಮಾಡೋದು. ಹುಡುಗರು ಇಸ್ಕೂಲಿಂದ ಬರೋ ಹೊತ್ತಾಯ್ತು ಇನ್ನು 'ಅಮ್ಮಾ, ತಿಂಡಿ, ಕಾಫಿ ಕೊಡು' ಅಂತಾ ಹೊಡಕೊಳ್ಳುಕ್ಕೆ. ಮಿಲ್ಲಿಗೆ ಹೋಗಿ ಗೋದಿ ಬೀಸಿಸಿಕೊಂಡು ಬಾರೋ ಅಂತ ನಮ್ಮ ಮೂರ್ತಿಗ್ಹೇಳಿದೆ. "ನಂಗೆ ಸಿನಿಮಾಕ್ಕೆ ದುಡ್ಡು ಕೊಡು, ನಾನು ಹೋಗ್ಬೇಕು" ಅಂತಾನೆ. ಸತ್ಯಂಗ್ಹೇಳಿದೆ "ಹೋಗೆ, ಲೆಕ್ಕ ಮಾಡ್ಕೊಬೇಕು. ಇಲ್ದಿದ್ರೆ ಮೇಷ್ಟ್ರು ಬಯ್ತಾರೆ" ಅಂತಾನೆ. ನಾಗಣ್ಣಿಗ್ಹೇಳಿದ್ರೆ ಚಿನ್ನಿ ದಾಂಡು ತೆಗೆದುಕೊಂಡು ಓಡ್ತಾನೆ. ಲಕ್ಷ್ಮೀಗ್ಹೇಳಿದೆ "ಹೋಗಮ್ಮ, ಅಣ್ಣಯ್ಯಂಗ್ಹೇಳು, ನಂಗಾಗುಲ್ಲ" ಅಂತಾಳೆ. ಅಯ್ಯೋ ಪುರುಸೊತ್ತೆ ಇಲ್ಲಾಂದ್ರೆ....ಇನ್ನು ಒಂದೆರಡೇಟು ಬಿಟ್ಟು ನಾಗಣ್ಣೀನ ಮಿಲ್ಲಿಗೆ ಕಳುಹಿಸಬೇಕು. ಅವರು ಆಫೀಸಿನಿಂದ ಬರೋ ಹೊತ್ತಾಯ್ತು. ಬರ್ತೀನೀಂದ್ರೆ....

ಏನವಸರಾಂದ್ರೇ, ಒಂದೇ ಬೀದೀಲಿದ್ದರೂ ನೀವು ನಮ್ಮ ಮನೇಗೆ ಬರೋದು ಐದಕ್ಕೆ, ಆರಕ್ಕೆ ಒಂದಾವರ್ತಿ. ಕೆಲ್ಸ ಇಷ್ಟೇ ಇದೆ, ಕೂತ್ಕೊಳ್ಳಿ. ಏನು ಸಮಾಚಾರ? ನಿಮ್ಮ ಶಂಕು ಗಂಡನಿಂದ ಕಾಗದ ಬಂದಿತ್ತೇ? ಯಾವ್ದಾದ್ರೂ ಕೆಲ್ಸ ಗಿಲ್ಸ ಸಿಕ್ತೆ ?

ಅಯ್ಯೋ ಇಲ್ಲಾಂದ್ರೆ....ಅದು ಏನೋ ಜೊಗಳೂರಿಗೆ ಹೋಗಿದ್ದಾನೆ. ಮಿಲಿಟರೀಲಿ ಹಿಂದೆ ಕೆಲ್ಸಕ್ಕಿದ್ದೋರನೆಲ್ಲಾ ಮತ್ತೆ ಸೇರ್ಸಿಕೊಳ್ತಾರಂತೆ, ನೋಡ್ಬೇಕು. ಹಾಗೆ ಅವರ ತಂದೆ ಮನೆಗೆ ತುಮಕೂರಿಗೆ ಹೋಗ್ತಾನೋ ಅಥವಾ ಬರ್ತಾನೋ ಕಾಣೆ. ಕಾಗ್ದ ಗೀಗ್ದ ಬಂದಿಲ್ಲಾಮ್ಮ. ಅಯ್ಯೋ, ಈ ಹಾಳು ಬ್ರಾಹ್ಮಣ ಜಾತೀಲಿ ಹುಟ್ಟಿದ್ದೇ ತಪ್ಪಾಗಿ ಬಿಟ್ಟಿದೇಂದ್ರೆ....ಏನೋ ಕಾಲ ವಿಚಿತ್ರವಾಗಿದೇಂದ್ರೆ. ಸೀತಮ್ಮ.......ಅದೇನು ಗಾಂಧಿಯುಗವೋ ಏನೋಮ್ಮ....ಹಾಗಂದ್ಹಾಗೆ ಜ್ಞಾಪಕಕ್ಕೆ ಬಂತು. ಗಾಂಧೀ ಮಹಾತ್ಮನ್ನ ಕೊಂದನಲ್ಲಾ ಅವನ್ನ ಸಾಯಿಸಿ ಬಿಡ್ತಾರಂತೆ. ಮರಣದಂಡನೆ ವಿಧಿಸಿದಾರಂತೆ. ಏನೋ ತಪ್ಪು ಮಾಡ್ದಾ ಅನ್ನಿ, ಆದರೆ ತಾನೆ ಅದು ಹೇಗ್ರಿ ಕೈಯಾರ ನಾವು ಸಾಯ್ಸೋದು ? ಅವನು ಮಾಡ್ದಾ ಅಂತ ನಾವು ಅವನ್ನ ಕರೆಂಟು ಕೊಟ್ಟು ಧೊಪ್ಪಂತಾ ಸಾಯಿಸಿ ಕೆಳಕ್ಕೆ ಕೆಡುವೋದಂತೆ. ಹಾಗಂತ ನಮ್ಮ ಯಜಮಾನ್ರು ಅಂದ್ರು. ಅದೇನು ಮಹಾ ದೊಡ್ಡಸ್ತಿಕೇಂದ್ರೆ. ನೋಡಿ, ಮೊನ್ನೆ ಏನಾಯ್ತೂಂತೀರಿ, ರೂಮಿನಲ್ಲಿ ಲೈಟ್ ಹಾಕುಕ್ಕೇಂತ ಹೋದೆ. ಸ್ವಿಚ್ ಹೀಗಂದೆ. ತಕ್ಷಣ ಮೈ ಕೈಯೆಲ್ಲಾ ಜುಮ್ಮಂತು. ಸರಕ್ಕಂತ ಕೈತೆಗೆದು ಬಿಟ್ಟೇ ಅನ್ನಿ. ನೆನೆಸಿಕೊಂಡರೆ, ಅಬ್ಬಾ, ಪಕ್ಕದ ಮನೆ ತುಳಸಮ್ಮಂಗ್ಹೇಳಿದೆ. ಅವರು ಅದಕ್ಕೆ "ಅದು ಹಾಗೇ ಆಗುತ್ತೆ" ಅಂದು ಬಿಟ್ರು. ಅವರೇ ಹೇಳಿದ್ರು, ಗಾಂಧಿ ಸಾಯಿಸಿದೋನಿಗೆ ಮರಣದಂಡನೇಂತಾ. ನಾನು ಸುಮ್ಮನಿರಲಿಲ್ಲಾನ್ನಿ, ಅಯ್ಯೋ ನಾನು ನಿಮ್ಮನ್ನ ಸಾಯ್ಸಿದ್ರೂ ಅದೇ ಶಿಕ್ಷೆ. ನೀವು ನನ್ನ ಸಾಯಿಸಿದ್ರೂ ಅದೇ ಶಿಕ್ಷೆ. ಅದೇನು ಮಹಾ, ಮಹಾತ್ಮಾನೇ ಒಪ್ಪೊಲ್ಲ. ಏನೂಂದ್ರೆ ಆ ಭಗವಂತ ಒಪ್ಪುತ್ತಾನೆಯೇ ? ನಂಗೆ ತಡೀಲಿಲ್ಲ. ಅಂದೇ ಬಿಟ್ಟೆ ಅನ್ನಿ. ಬರ್ತೀನೀಂದ್ರೆ ಪುರುಸೊತ್ತಿಲ್ಲ.

ನಿಂತ್ಕೊಳ್ಳಿ ಕುಂಕುಮ ಇಟ್ಕೊಂಡು ಹೋಗೋರಂತೆ. ಕಮಲಮ್ಮ ನೋರೇ.

ಹುಂ. ಕೊಡಿ ಅಮ್ಮ ಬೇಗ. ನಿಮ್ಮನೇಲಿ ಅಡಿಗೆ ಏನ್ಮಾಡಿದಿರೀಂದ್ರೆ? ನಾನೇನೋ ಒಂದು ಅನ್ನ ಸಾರು ಮಾಡಿದ್ದೆ.

ನಾನು ಸೊಪ್ಪಿನ ಹುಳಿ, ಬಾಳೇಕಾಯಿ ಪಲ್ಯ ಮಾಡಿದ್ದೇಂದ್ರೆ. ಅಯ್ಯೋ ಅದೇನು ಸೊಪ್ಪೋ ಹಾಳು. ಬರೀ ಕಡ್ಡಿ, ಕಡ್ಡಿ; ಬಲಿತು ಕಟ್ಟುರಾಗಿ ರುತ್ತೆ; ಅದೋ ಆಣೇಗೆ ೩ ರಂತೆ. ಕಿರುಬೆರಳು ಗಾತ್ರಕ್ಕಿರುತ್ತೆ; ಆ ಹೊಸಕ್ಕಿ ಅನ್ನಕ್ಕೂ....ಅದಕ್ಕೂ....ಹೊಟ್ಟೆ ತೊಳ್ಕೋಬೇಕು.—ಏನೋ ಕಾಲ ಅತೀ ನಾಜೂಕಾಯ್ತೂಂದ್ರೆ. ಒಂದು ತೆಂಗಿನಕಾಯಿಗೆ ನಾಕಾಣೆ, ಐದಾಣೆ. ಅದೂ ಒಂದು ಬೇಲದ ಕಾಯಿ ಗಾತ್ರ ಇರುತ್ತೆ. ಏನೋ ಸಾಯಂಕಾಲದ ಹೊತ್ತು ಹುಡುಗರ ಕೈಗೆ ಒಂದು ಚೂರು ತಿಂಡಿ ಮಾಡಿ ಕೊಡೋಣಾಂತ ಮೊನ್ನೆ ೩ ತೆಂಗಿನಕಾಯಿ ತರಿಸಿದ್ದೆ; ಮುಂದುಗಡೆ ಮನೆ ಸೇತೂರಾಯರ ಕಾರ್ಡಿನಲ್ಲಿ ಒಂದು ರೂಪಾಯಿನ ಅಕ್ಕಿ ತರ್ಸಿದ್ದೆ. ಅಕ್ಕಿ ಸಿಕ್ಕಿದ್ದೇ ಹೆಚ್ಚು; ಅದೇ ಅವರ ಹೆಂಡತೀನ ಬಾಣಂತನಕ್ಕೆ ತವರು ಮನೆಗೆ ಕಳುಹಿಸಿದಾರಲ್ಲ, ಅದರಿಂದ ಸಿಕ್ತು. ಏನೋ ಸ್ವಲ್ಪವೂ ಚೆನ್ನಾಗಿರಲಿಲ್ಲಾಂದ್ರೆ. ಕೋಡುಬಳೆ.

ನಾನು ಅದಕ್ಕೇ ಅದನ್ನೆಲ್ಲಾ ಹಚ್ಚಿಕೊಂಡು ಹೋಗುಲ್ಲಮ್ಮ. ಸರಿ, ನಿಮಗೂ ನಮಗೂ ಏಣಹೋಣೆಯೇ ? ಮನೇಲಿ ಮಕ್ಕಳ ಕಾಟವಿಲ್ಲ. ದೇವರು ಕೊಟ್ಟಹಾಗೆ ಕೈತುಂಬಾ.... ಇದೆ. ಮನೇಲಿ ಆಳು ಕಾಳು ಬೇಕಾದ ಹಾಗೆ ಇದಾರೆ. ಅದೇನೋ ಹೇಳ್ದಹಾಗಾಯ್ತು, ಸೀತಮ್ಮ.

ಅಯ್ಯೋ ಸಾಕು ಸುಮ್ಮನಿರಿ. ಬೇಕಾದ ಹಾಗೆ ಇದ್ದರೆ ಬಂತೆ ಭಾಗ್ಯ! ....ಹುಂ....ಆಳು ಕಾಳು ಇದ್ದರೆ ಬಂತೆ ಭಾಗ್ಯ ! ಕಾಲ ಕೆಟ್ಟು ಹೋಯ್ತು, ಕಮಲಮ್ಮ. ಹಿಂದಿನ ಹಾಗಲ್ಲ. ಏನೋ ಕೈಲಾಗದ್ದಕ್ಕೆ ಆಳೂ ಕಾಳೂಂತ; ಒಂದು ಪುಲ್ಲು ಕಡ್ಡಿ ಬಿದ್ದಿದ್ರೆ ಅದನ್ನು ತೆಗೆದು ಆ ಕಡೆ ಹಾಕಲ್ಲ. ಅವರು ಹೇಳಿದ ಹಾಗೆ ನಾವು ಕೇಳ್ಬೇಕು. ಅವರು ಮಾಡಿದಾಗ ಕೆಲಸವಾಗಬೇಕು. ಮೊನ್ನೆಯಿಂದ ಹೇಳ್ತಿದೀನಿ 'ನಮ್ಮ ತಾಯೀ ಮನೇಗೆ ಅಕ್ಕಿ ಕೊಟ್ಬಿಟ್ಟು ಬಾ' ಅಂತ. ಏನೋ ಇಲ್ಲಾಂತ ಹೇಳಿ ಕಳಿಸಿದ್ರು. ಚೀಲಕ್ಕೆ ತುಂಬಿಟ್ಟು ೩ ದಿನವಾಯ್ತು. ಏನೋ ಒಂದೇ ಊರಿನಲ್ಲಿ ಕಣ್ಣೆದುರಿಗೆ ಇರೋದರಿಂದ.... ಮನಸ್ಸು ತಡೆಯುಲ್ಲಾ....ಅಷ್ಟೆಲ್ಲಾ ಯಾಕೆ....ಅವತ್ತು ನನ್ನ ತಮ್ಮನ

# ಫಜೀತಿ

ಆ ಮೆಣಸಿನ ಪುಡಿ ಡಬ್ಬವೆಲ್ಲಿ ? ಹುಣಿಸೇ ಹಣ್ಣಿನ ಕುಕ್ಕೆ ಎಲ್ಲಿಟ್ಟಿದ್ದೀಯೆ ? ಥೂ, ಹಾಳು, ಒಂದ್ಸಿಕ್ಕಿದರೆ ಇನ್ನೊಂದಿಲ್ಲ, ಸಂಸಾರಸ್ಥರ ಸಂಸಾರವೇನೇ ಇದು ? ಆ ಉಪ್ಪಿಂದೆಲ್ಲೀ ?

ಅಯ್ಯೋ ಏನ್ಹಾಗಾಡ್ತೀರೀಂದ್ರೆ ! ಸುಮ್ನೆ ಎಲ್ಲಾದಕ್ಕೂ ರೇಗೋದು! ನೋಡಿ, ಅಲ್ಲೀ ಆ ಒಡುವಿನ ಮೇಲೇ ಇದೆ—ಮೆಣಸಿನ ಪುಡೀದು. ಆ ಬೇಳೆ ಡಬ್ಬದ ಪಕ್ಕದಲ್ಲೀ ಇರಬೇಕು. ಎಲ್ಲಿಟ್ರಿ ಆ ಬೇಳೇದನ್ನ ? ಈಗ ನೀವೇ ಬೇಳೆ ಬೇಯು ಹಾಕಿದ್ರಿ !

ಎಲ್ಲೋ ಅಕಸ್ಮಾತ್ ಬೇಳೇದು ಸಿಕ್ಕಿಬಿಡ್ತು. ಬೇಳೆ ಬೇಯು ಹಾಕಿದ್ದಾಯ್ತು. ಮೆಣ್ಸಿನ ಪುಡೀದು ಎಲ್ಲಿದ್ಯೋ ಏನೋ ! ಅದೋ ಹಾಳು ಒಂದೇ ತರಹದ ಡಬ್ಬಗಳು ! ಬ್ಯಾಡ, ಒಂದೇ ತರಹದ್ದು—ಬೇರೆ ಬೇರೆ ತರಹದ್ದು ತರ್ತೀನೀ ಅಂದ್ರೆ—ಇಲ್ಲ ಇಲ್ಲ, ಬ್ಯಾಡೀಂದ್ರೆ, ಒಂದೇ ತರಹದ್ದು ಚೆನ್ನಾಂದ್ರೆ, ಲಕ್ಷಣವಾಗಿರುತ್ತೆ ಅಂತಾ ನಗುನಗ್ತಾ ಹೇಳಿಬಿಟ್ಳು.

ಥೂ, ಸುಮ್ನೆ ಗೊಣಗುಟ್ಬ್ಯಾಡೀಂದ್ರೆ !

ಹುಂ, ಅಲ್ಲಾಕಣೇ ! ಆಯಾಯ ಡಬ್ಬಗಳ ಮೇಲೆ ಆಯಾಯ ಸಾಮಾನಿನ ಪಟ್ಟೀನಾದ್ರೂ ಅಂಟ್ಸಬಾರ್ದೇನೆ ? ಬೇಳೆ ಕುದ್ಹೋಯ್ತು. ಸಧ್ಯ ಸಿಕ್ತಪ್ಪ—ಮೆಣಸಿನ ಪುಡೀದು! ಎಷ್ಟು ಹಾಕ್ಲೀ ಮೆಣಸಿನ ಪುಡೀನ? ಒಂದು ಬೊಗ್ಸೆ ಹಾಕ್ಲೇನೆ? ಒಂದರ್ಧ ಕಲ್ಸೋರೆ ಸಾರು ಮಾಡಿದ್ರೆ ಸಾಕಾಗುಲ್ವೇನೆ ?

ಹೂಂ, ಮೊದಲೊಂದು ಹಿಡಿಯಷ್ಟು, ಮೇಲೊಂದು ಸ್ವಲ್ಪ—ಒಂದು ಚಮ್ಚದಷ್ಟು ಮೆಣಸಿನ ಪುಡೀ ಹಾಕಿ. ಕಲ್ಸೋರೆ ಮೇಲೆ ಆ ತಟ್ಟೇ ಮುಚ್ಚಿಬಿಡೀಂದ್ರೆ !

ಹೂಂ, ಹಾಗೇ ಮಾಡ್ತೀನಿ. ತಟ್ಟೆಯೆಲ್ಲಿಟ್ಟಿದೀಯೆ ?

ಅಲ್ಲೇ ನೆಲುವಿನ ಮೇಲೆ, ಹಾಲಿನ ಮಡಕೇ ಮೇಲೆ ಮುಚ್ಚಿಲ್ವೇಂದ್ರೆ!

ಹೊಂ, ಸರಿ ಸಿಕ್ಕಿತು. ಥೂ ! ಹಾಲೂ ಚೆಲ್ಹೋಯ್ತು, ಮಧ್ಯಾಹ್ನ ಕಾಫಿಗೇನಪ್ಪಾ ಗತಿ !

ಏನವಸರಾಂದ್ರೆ? ಕೊಂಚವಾದ್ರೂ ಸಿಧಾನವೆ ಬೇಡ್ವೆ? ಆತ್ರಾಂದ್ರೆ ಆತ್ರ !

ಹೂ. ಮುಚ್ಚಿ ಕಣೆ—ಹುಣ್ಸೆ ಹಣ್ಣೆಂದೆಲ್ಲಿ ?

ಅಲ್ಲೇ ಆ ಬಡ್ವಿನ ಕೆಳ್ಗೆ ಅಂಚು ಕಿತ್ಹೋಗಿರೋ ಆ ಸಣ್ಣ ಕುಕ್ಕೇ ಲಿಲ್ವೇಂದ್ರೆ !

ಹೂಂ. ಸಿಕ್ತು, ಯಾತ್ರಲ್ಲಿ ನೆನೇ ಹಾಕೋದೇ?

ಅಲ್ಲೇ ಯಾವ್ದಾದ್ರೂ ಒಂದ್ಸಣ್ಣ ಗಂಜು ತಗೋಳೀಂದ್ರೆ !

ಏನೇ, ಈ ಸಣ್ಣ ಗಂಜಲ್ಲಿ ನೆನೆ ಹಾಕಿದೀನಿ! ಕಲಾಯಿ ಇದೇ ತಾನೇ?

....ಅಯ್ಯೋ ಕಥೆ, ಮೊದ್ಲೆ ಹೇಳ್ಬೇಡ್ವೇನೆ? ತಥ್ ಸಾಕಪ್ಪಾ ಸಾಕು.

ಅಲ್ಲೇ ದೇವ್ರ ಮುಂದಿರೋ ಆ ಬೆಳ್ಳಿ ತಟ್ಟೇಗಾದ್ರೂ ಸುರೀರೀಂದ್ರೆ.

ಹೂಂ, ತಟ್ಟೆಯೆಲ್ಲಾ ಅರಿಸಿನ ಕುಂಕುಮವಾಗಿದೆಯಲ್ಲೇ.

ಹ್ಞೂ, ನಿನ್ನೆ ಮಂಗಳಗೌರೀ ವ್ರತಕ್ಕಿಟ್ಕೊಂಡಿದ್ದೆನಲ್ಲಾಂದ್ರೆ-ಅಲ್ಲೇ ಸ್ವಲ್ಪ ನೀರುಹಾಕಿ ಗಲವರಿಸಿಕೊಂಡು ಬಿಡಿ !

ಹ್ಞೂ ಆಯ್ತು, ನಂಗೆ ಬೇಳೆ ಕಿವುಚಕ್ಕೆ ಬರೋಲ್ಲ ಕಣೇ !

ಅಯ್ಯೋ, ಆ ಸಣ್ಣ ಕೈಮಂತು ತಗೊಂಡು ಸ್ವಲ್ಪ ಕಡ್ದು ಬಿಡೀಂದ್ರೆ!

ಮಂತೆಲ್ಲಿಟ್ಟಿದ್ದೀಯೆ ?

ಅಲ್ಲೇ ಆ ಸ್ಟ್ಯಾಂಡ್ ಮೇಲೆ.

ಕಲ್ನೋರೆ ಒಲೆ ಮೇಲಿರೋವಾಗ್ಲೆ ಕಡದುಬಿಡೋದು ತಾನೆ ?

ಹ್ಞೂ—

ಅಯ್ಯೋ ಬಿಸಿ ! ಮುಖಕ್ಕೆ, ಮೈ ಕೈಗೆಲ್ಲಾ, ಬಟ್ಟೆಬರೆಗೆಲ್ಲಾ ಆಯ್ತಲ್ಲೇ... ........

ಹೋಗ್ಲಿ, ಸಾಕೊಂದ್ರೆ. ಅನ್ನವಾಯ್ತು; ನೋಡಿ; ಸಣ್ಣ ಒಲೇಮೇಲಿಟ್ಟಿದ್ದನ್ನು ನೋಡಿದ್ರೋ ಇಲ್ಲವೋ ?

ಅಯ್ಯೋ ಮರ್ತೇಹೋಯ್ತು, ತಡ್ಯೇ !

ಸ್ವಲ್ಪ ಕೊಳ್ಳಿ ಮುಂದಕ್ಕೆ ನೂಕಿ, ಅನ್ನದ ತಪ್ಪೆಲೆ ಸರಿಯಾಗಿಟ್ಟು ತೊಳಸೀಂದ್ರೆ !

# ಮುದ್ರಾದೇವತೆ

ಅಚ್ಚಿನ ದೋಷಗಳು ದೋಷಗಳೆಂದು ಒಪ್ಪಲು ನಾನು ಸಿದ್ಧನಿಲ್ಲ. ಅಚ್ಚಿನ ದೋಷಗಳು ನನ್ನ ಪಾಲಿಗೆ ಮಾತ್ರ ಅಚ್ಚುಮೆಚ್ಚಿನ ದೋಷಗಳಾಗಿವೆ. ನನ್ನ ಮಿತ್ರರೊಬ್ಬರು ಒಂದು ಕವನ ಬರೆದು, ಅದಕ್ಕೆ ಯಾವ ಕಾವ್ಯನಾಮ ವಿಟ್ಟುಕೊಳ್ಳಬೇಕೆಂಬುದನ್ನು ತಿಳಿಯದೆ 'ಕವಿಕಂಸ' ಎಂಬ ಹೆಸರಿಟ್ಟು ಕೊಂಡರು. ಆದರೆ ಅಚ್ಚಿನ ದೋಷದಿಂದ ಅದು 'ಕವಿಹಂಸ' ಎಂದು ಆಗಿ ಬಿಟ್ಟಿತ್ತು. ಇಂದಿಗೂ ನನ್ನ ಮಿತ್ರರು 'ಕವಿಹಂಸ' ಎಂಬ ಕಾವ್ಯನಾಮವನ್ನೇ ಅಮರವಾಗಿಸಿಬಿಟ್ಟಿದ್ದಾರೆ. ಒಮ್ಮೆ ಮಾತ್ರ ನನ್ನ ಇನ್ನೊಬ್ಬ ಮಿತ್ರರು ಅಚ್ಚುಮಾಡಿಸಿದ 'ಪೌರನೀತಿ' ಎಂಬ ಪುಸ್ತಕದ ಹೊದಿಕೆಯ ಮೇಲೆ, ಶೀರ್ಷಿಕೆಯಲ್ಲೇ ತಪ್ಪು ಅಚ್ಚಾಗಿಹೋಗಿತ್ತು. ತಪ್ಪೆಂದರೆ ಇಷ್ಟೆ—'ಪೌರನೀತಿ' ಎಂದು ಹೋಗಿ 'ಕ್ಷೌರನೀತಿ' ಎಂದು ಬಿದ್ದಿತ್ತು. ನನ್ನ ಮಿತ್ರರು ಅದಕ್ಕೊಂದು ತಿದ್ದುಪಡೆಯ ಶೀಪೆ ಹಚ್ಚಿಸಬೇಕೆಂದರು. ಆದರೆ ಅದರಿಂದ ಅಚ್ಚಿನ ಬೆಡಗಿಗೆ ಅಡಚಣೆಯಾಗುವುದೆಂದು ಅರಿತು, ಹಾಗೇ ಇಟ್ಟುಬಿಡಲು ನಾನು ಹೇಳಿದೆನು. 'ಸರಿ, ಸಹೃದಯವಾಚಕರು ಸುಧಾರಿಸಿಕೊಂಡು ಓದಬಹುದಲ್ಲ!' ಎಂದು ಅವರೂ ಹಾಗೇ ಬಿಟ್ಟರು. ಆದರೆ ವಿಚಿತ್ರದ ಸಂಗತಿಯೆಂದರೆ, ಈ ಅಚ್ಚಿನ ದೋಷದ ತಳಿಬರಹವೇ, ಅದರ ಮೊದಲನೆಯ ಆವೃತ್ತಿ ಆರೇ ತಿಂಗಳಲ್ಲಿ ತೀರಿಹೋಗಲು ಕಾರಣವಾಯಿತು.

ನನ್ನ ಇನ್ನೊಬ್ಬ ಮಿತ್ರರು ಪ್ರತಿವರ್ಷವೂ ಪಠ್ಯಪುಸ್ತಕಕ್ಕೆ ಗೈಡು ಬರೆಯುವುದುಂಟು. ಗೈಡಿನ ಪುಟಗಳು ನೂರಿದ್ದರೆ, ಒಪ್ಪೋಲೆಯ ಪುಟಗಳು ನೂರಿಪ್ಪತ್ತು ಇರುತ್ತಿದ್ದುವು. ಅಂತೆಯೆ ಅವರು ಒಪ್ಪೋಲೆಯ ಬೆಲೆಯನ್ನು ಒಂದೂವರೆ ರೂಪಾಯಿ ಇಟ್ಟು— 'ಒಪ್ಪೋಲೆ ಕೊಂಡವರಿಗೆ ಗೈಡು ಕಾಣಿಕೆಯಾಗಿ ಸಲ್ಲುತ್ತದೆ.' ಎಂದು ಪ್ರಕಟಿಸಿದ್ದರು. ಇಷ್ಟಕ್ಕೆ ಮುಗಿಯಲಿಲ್ಲ, ಇದರ ಮೋಜು: ಒಪ್ಪೋಲೆಯಲ್ಲಿ 'ತಪ್ಪು' ಎಂಬ ಸ್ಥಳದಲ್ಲೇ

ಸರಿಯಾದ ಶಬ್ದಗಳು ಬಿದ್ದು 'ಒಪ್ಪು' ಎಂಬಲ್ಲೇ ತಪ್ಪು ಶಬ್ದಗಳು ಬಿದ್ದಿದ್ದುವು. 'ಹಾಗಾದರೆ ಸುಳ್ಳೇ ಒಪ್ಪೋಲೆಯನ್ನೇಕೆ ಪ್ರಕಟಿಸುವುದು ?' ಎಂದು ನನ್ನ ಮಿತ್ರರು ಆಲೋಚಿಸಿದರು. ಆದರೆ ಇದಕ್ಕೊಂದು ಸಾಲು ಮರುವೊಪ್ಪೋಲೆ ಬರೆದು ಬಿಡೋಣ— 'ಇಲ್ಲಿ ತಪ್ಪು ಇದ್ದಲ್ಲಿ ಒಪ್ಪು, ಒಪ್ಪು ಇದ್ದಲ್ಲಿ ತಪ್ಪು' ಎಂದು ತಿದ್ದಿಕೊಂಡು ಓದಬೇಕು—ಎಂದು ನಾನು ಸೂಚಿಸಿದೆ. ದುರ್ದೈವದ ಸಂಗತಿಯೆಂದರೆ ಈ ಒಪ್ಪೋಲೆಯ ತುಕಡಿಗಳನ್ನು ಸಾವಿರ ಪ್ರತಿಗಳಿಗೂ ಅಂಟಿಸಿದ ಮೇಲೆ ಗೊತ್ತಾಯಿತು : "ತಪ್ಪು ಇದ್ದಲ್ಲಿ ತಪ್ಪು, ಒಪ್ಪು ಇದ್ದಲ್ಲಿ ಒಪ್ಪು ಎಂದು ತಿದ್ದಿಕೊಂಡು ಓದಬೇಕು. ಎಂದು ಬಿದ್ದುದು.

ಕೆಲಕೆಲವು ಅಚ್ಚಿನ ದೋಷಗಳು ಮನೋರಂಜಕವಾಗಿರುತ್ತವೆ-ಯಷ್ಟೇ ಅಲ್ಲ; ಅರ್ಥಪೂರ್ಣವೂ ಆಗಿರುತ್ತವೆ. "ಎಲ್ಲರೂ ಇದಕ್ಕೆ ಓ ಕೊಡಬೇಕು" ಎಂದಿದ್ದ ಒಂದು ವಾಕ್ಯದಲ್ಲಿ "ಎಲ್ಲರೂ ಓಡಬೇಕು" ಎಂದು ಬಿದ್ದಿತ್ತು. "ತಮ್ಮ ನಾಲ್ಕು ಮತಗಳನ್ನು ಕೊಡಬೇಕು" ಎಂಬ ಒಂದು ಇಲೆಕ್ಶನ್ ಪ್ರಕಟನೆಯಲ್ಲಿ "ತಮ್ಮ ನಾಲ್ಕು ಮಗಳನ್ನು ಕೊಡಬೇಕು," ಎಂದು ಬಿದ್ದಿತ್ತು. ಒಂದೆಡೆಗೆ 'ದಿವಂಗತ' ಎಂಬಲ್ಲಿ ದಿ. ಎಂಬ ಲಘು ಪ್ರಯೋಗವಿತ್ತು. ಆದರೆ ಇದು ಸ್ಪಷ್ಟವಾಗಲೆಂದು ಪ್ರೂಫಿನಲ್ಲಿ 'ದಿವಂಗತ' ಎಂದು ಪೂರ್ಣಗೊಳಿಸಿ ತಿದ್ದಿದಾಗ, ಕಂಪೋಜಿಟರನು 'ದಿ ಇಮ್ಮಾರ್ಟಲ್ ಮ್ಯಾನ್' ಎಂಬ ಒಂದು ಪುಸ್ತಕದ ಹೆಸರು ಇದ್ದ ಸ್ಥಳದಲ್ಲಿ ಸಹ 'ದಿವಂಗತ ಇಮ್ಮಾರ್ಟಲ್ ಮ್ಯಾನ್' ಎಂದು ಪ್ರಕಟಿಸಿಬಿಟ್ಟಿದ್ದ. ಮತ್ತೊಮ್ಮೆ, ಒಂದೆಡೆಗೆ 'ಮುಗಿಲಬಣ್ಣ' ಎಂದಿದ್ದಲ್ಲಿ "ಮುಲಗಿ ಬಣ್ಣ" ಎಂದು ಅಚ್ಚಾದಾಗ, ಒಬ್ಬ ಸಂಶೋಧಕರು "ಬಣ್ಣ" ಎಂಬುದು ಮರಾಠಿ ಶಬ್ದವಿರಬಹುದೆ?—ಎಂದು ದೊಡ್ಡದೊಂದು ಲೇಖ ಬರೆದರು. ಏಕೆಂದರೆ 'ಮುಲಗಿ' ಮರಾಠಿಯಾಗಿದ್ದಿತಲ್ಲವೆ ? ನಾಟಕ ಕಂಪನಿಯೊಂದರ ಜಾಹಿರಾತಿನ ಪತ್ರದಲ್ಲಿ—'ಪ್ರಪಂಚದರ್ಪಣ ನಾಟಕ ಕಂಬನಿ' ಎಂದು ಅಚ್ಚಾಗಿದ್ದು, ಅದು ಎಷ್ಟು ಅರ್ಥವತ್ತಾಗಿತ್ತೆಂಬುದು ಪ್ರೇಕ್ಷಕರ ಪ್ರತ್ಯಯಕ್ಕೆ ಆ ಮೇಲೆ ಬಂತು.

ದಿವಂಗತರಾದ ಕೆಲವು ಮಹನೀಯರ ಬಗ್ಗೆ ಪಾಸಾದ ಒಂದು ಸಭೆಯ ಗೊತ್ತುವಳಿ ಒಂದು ಪತ್ರಿಕೆಯಲ್ಲಿ ವರದಿಯಾಗಿತ್ತು. ಆದರೆ ಒಬ್ಬ ದಿವಂಗತರ ಸಂಕ್ಷಿಪ್ತನಾಮ R. S. ಎಂಬದರ ಬದಲು P. S. ಎಂದು ಪ್ರಕಟವಾಗಿತ್ತು ಪಾಪ ದುರ್ದೈವದಿಂದ ಶ್ರೀಯುತ P. S. ಇಂಥವರು ಜೀವಂತವಾಗಿದ್ದರು. ಆಂತೆಯೇ ಮುಂದಿನ ಪತ್ರಿಕೆಯಲ್ಲಿ ತಿದ್ದುಪಡಿ ಬಂತು— 'ದಿವಂಗತರು P. S. ಅಲ್ಲವೆಂದು ತಿಳಿಸಲು ವಿಷಾದಿಸುತ್ತೇವೆ' ಎಂದು.

ಹಸ್ತಪ್ರತಿಯು ದಕ್ಷಿಣಕರ್ನಾಟಕದ 'ಕ' ಕ್ಕೂ ಉತ್ತರ ಕರ್ನಾಟಕದ 'ಕ' ಕ್ಕೂ ಸ್ವಲ್ಪ ಅಂತರವಿದೆಯಷ್ಟೆ? ಆಂತೆಯೆ ಅದೆಷ್ಟು ಸಲ ಉತ್ತರದ ಹಸ್ತಪ್ರತಿಯಲ್ಲಿ 'ಕಲೆ' ಯೆಂತಿದ್ದುದು ದಕ್ಷಿಣದ ಪತ್ರಿಕೆಯಲ್ಲಿ 'ತಲೆ' ಯಾಗಿದೆಯೋ—'ಕತ್ತಿ' 'ತತ್ತಿ'. ಯಾಗಿದೆಯೊ—ಲೆಕ್ಕವಿಟ್ಟು ಹೇಳಲು ಅಂಜಿಕೆ. ಒಮ್ಮೆ ಆಂತೂ ಉತ್ತರ ಕರ್ನಾಟಕದಿಂದ ಒಂದು ಪುಸ್ತಕವಿಮರ್ಶೆ ದಕ್ಷಿಣ ಕರ್ನಾಟಕ ಪತ್ರಿಕೆಯೊಂದರಲ್ಲಿ ಹೀಗೆ ಅಚ್ಚಾಗಿತ್ತು—'ತಲಾಭಿಮಾನಿಗಳೆಂದು ತರೆದ-ಕೊಳ್ಳುವವರು ಹೀಗೆ ಗ್ರಂಥಗಳನ್ನು ಬರೆಯುವುದರಿಂದ, ತಲೆಯ ತೊಲೆಯನ್ನು ಮಾಡಿದಂತಾಗುತ್ತದೆ. ಶಿಲೆಯಲ್ಲಿಯೂ ತಲೆಯನ್ನು ತಂಡರಿಸಿದ ಅಂದಿನ ರೂವಾರಿಗಳೆತ್ತ, ಕಾಗದದಲ್ಲಿ ತಲೆಯನ್ನು ತೊಲೆಮಾಡಿದ ಇಂದಿನ ತಲಾತಾರರೆತ್ತ!'

ಕಂಪೋಜ್ ಮಾಡುವ ಮುಂದೆ ಅಕ್ಷರದ ಕೊಂಬುಗಳನ್ನು ಹೆಚ್ಚುಕಡಿಮೆ ಮಾಡಿ ಆದ ಅನಾಹುತಗಳು ಮನೋರಂಜಕವಾಗಿರುತ್ತವೆ. "ವರುಣದೇವನು ಕಣ್ತೆರೆದನು" ಎಂಬ ಮಳೆಗಾಲದ ವರದಿಯೊಂದರಲ್ಲಿ 'ರ' ದ ಕೊಂಬನ್ನು 'ವ' ಕ್ಕೆ ಹಚ್ಚಿಬಿಟ್ಟದರಿಂದ 'ಮರಣದೇವನು ಕಣ್ತೆರೆದನು' ಎಂದು ಅಚ್ಚಾಗಿತ್ತು. ಆದೇ ರೀತಿಯಲ್ಲಿ ಇನ್ನೊಂದೆಡೆಗೆ 'ಶಂಭುರಾವ' ಎಂಬುವರ ಬದಲು 'ಶುಂಭರಾವ' ಎಂದು ಒಬ್ಬ ಮಹನೀಯರ ಹೆಸರು ಅಚ್ಚಾಗಿತ್ತು. 'ಹುಚ್ಚರಾಯರಿಗೆ ಲಕ್ಷ್ಮಣರಾಯನು ಅಳಿಯನು' ಎಂದಿದ್ದುದು 'ಹುಚ್ಚರಾಯರಿಗೆ ಲಕ್ಷ್ಮಣರಾಯನು ಅಳಿದನು' ಎಂದು ವ್ಯಂಗಾರ್ಥದಲ್ಲಿ ಸಾರ್ಥಕವಾಗಿ ಅಚ್ಚಾಗಿತ್ತು, ನನ್ನ ಮಿತ್ರರೊಬ್ಬರ ಕತೆಯಲ್ಲಿ. ಇನ್ನು 'ಚಂದಾಹಣ' ಎಂಬ ಶಬ್ದ 'ಚೆಂದಾ ಹೆಣ' ವೆಂದೂ

' ಡಾಂಭಿಕ ' ಎಂಬುದರ ಬದಲು ' ಡಾಂಭಿಗ ' ಎಂದೂ 'ಘಟಸ್ಫೋಟ' ಎಂಬುದು ' ಛಟಸ್ಫೋಟ ' ವೆಂದೂ ' ವೈವಿಧ್ಯ ' ಎಂಬ ಶಬ್ದ ' ವೈಧವ್ಯ ' ಎಂದೂ ಅಚ್ಚಾಗಿದ್ದರೆ ಆಶ್ಚರ್ಯವೇನೂ ಇಲ್ಲ.

ಹೇಳಿದೆನಲ್ಲ; ಅಚ್ಚಿನ ದೋಷಗಳು ಒಮ್ಮೊಮ್ಮೆ ತಲೆಯ ದೋಷ ಗಳನ್ನು ಕಳೆಯ ಭೂಷಣಗಳನ್ನಾಗಿ ಮಾಡುತ್ತವೆಂದು. ಅಂತೆಯೇ ನನ್ನ ಮಿತ್ರನು ಯಾವಾಗಲೂ ಅಶಿಕ್ಷಿತನಾದ ಒಬ್ಬ ವಿಶಿಷ್ಟ ಕಂಪೋಜಿಟರ ನಿಂದಲೇ ತನ್ನ ಪುಸ್ತಕಗಳನ್ನು ಅಚ್ಚು ಮಾಡಿಸುವುದು. ಅವನ ಲೇಖನ ಸ್ಖಾಲಿತ್ಯಗಳನ್ನು, ಕಂಪೋಜಿಟರನು ಸುಧಾರಿಸಿಕೊಂಡು ಮೊಳೆಜೋಡಿಸು ವಲ್ಲಿ ತನ್ನ 'ಜಾಣ್ಮೆ'ಯನ್ನೂ ಬೆರೆಯಿಸಿ, ನನ್ನ ಮಿತ್ರನಿಗೂ ಅವನ ಕೃತಿ ಗಳಿಗೂ ಅಮರಕೀರ್ತಿಯನ್ನು ತರುವನು. ಏಕೆಂದರೆ 'ನಾಡಿಗ ಮಧುಸೂದನ ಶೇಷಗಿರಿ' ಎಂದರೆ, ಲಘುರೂಪವಾಗಿ ' ನಾ. ಮ. ಶೇಷಗಿರಿ ' ಎಂದು ಬರೆದ ಹೆಸರನ್ನು ಆವನು ಯಾವ ವಿರಾಮ, ಅಲ್ಪವಿರಾಮ ಚಿಹ್ನೆಗಳಿಲ್ಲದೆ ನಿರಂತರವೂ ' ನಾಮಶೇಷ ' ಗಿರಿಯವರು ಎಂದು ಅಚ್ಚುಮಾಡಿರುತ್ತಾನೆ.

ಅಂತೆಯೆ ಮುದ್ರಣ ದೋಷಗಳು ಒಂದು ದೊಡ್ಡ ಅಭ್ಯಾಸದ ವಿಷಯ ವಾಗಿದೆಯೆಂದು ಹೇಳಬೇಕು. ಮೂಲ ಲೇಖನದಲ್ಲೆ ಲೇಖನ ದೋಷಗಳಾ ಗಿದ್ದರೆ ಲೇಖಕನ ಮನೋವ್ಯಾಪಾರವನ್ನೂ, ಮುದ್ರಣದಲ್ಲಿ ದೋಷಗಳಾಗಿ ದ್ದರೆ ಕಂಪೋಜಿಟರನ ಬುದ್ಧಿ ವ್ಯಾಪಾರವನ್ನೂ ವ್ಯಕ್ತಪಡಿಸುತ್ತವೆ; ಅದರ ಜೊತೆಗೆ ಸಂಶೋಧಕರ•ವಿಚಾರಕ್ಕೆ ಅನ್ನಕೊಡುತ್ತವೆ. ಅಂತೆಯೆ ಹೇಳು ವುದು ಮುದ್ರಾರಾಕ್ಷಸನು ನಿಜವಾಗಿಯೂ ಪ್ರಚ್ಛನ್ನ ಕಲ್ಯಾಣಕಾರಿಯಾದ್ದ ಮುದ್ರಾದೇವತೆಯೆಂದು.

# ಸೋಮಾರಿಯ ಪಾಡು

"ಕಾಯಕವೆ ಕೈಲಾಸ" ಎಂದು ಮಹಾನುಭಾವರೊಬ್ಬರು ಸಾರಿದರು. "ಈಸಬೇಕು, ಇದ್ದು ಜಯಿಸಬೇಕು" ಎಂದು ಇನ್ನೊಬ್ಬ ಮಹಾನುಭಾವಿಗಳು ಉಗ್ಗಡಿಸಿದರು.

ಕಾಯಕ ಮಾಡಿದರೆ ಕೈಲಾಸವಂತೆ ! ಸ್ವಾಮೀ ಈ ಭೂಲೋಕದಲ್ಲಿ ಇನ್ನೂ ನಾಲ್ಕೊಪ್ಪತ್ತು ಜೀವಂತವಾಗಿ ಬದುಕಬೇಕೆಂದು ಆಸೆ ಪಡುವದು ಬಿಟ್ಟು ಕೈಲಾಸ ಸೇರುವದಕ್ಕೆ ಯಾರು ಇಚ್ಛಿಸಟ್ಟಾರು ? ಅಂತೆಯೇ ಜೀವಂತ ಕೈಲಾಸವಾಸಿಗಳಾಗುವ ಪುಣ್ಯ ನಮಗೆ ಬೇಡ.

"ಈಸಬೇಕು ಇದ್ದು ಜಯಿಸಬೇಕು. ಈ ದಂಡೆಯಿಂದ ಈಸುಬಿದ್ದು ಆ ದಂಡೆ ಮುಟ್ಟಿದರೆ ಜಯಸಿದಂತೆ. ಇದೇ ದಂಡೆಯ ಮೇಲೆ ಹಾಯಾಗಿ ದ್ದರೆ ಆಗುವ ನಷ್ಟವೇನು? ಎಳೆಯ ಬಿಸಿಲು ಬಿಳಿಯ ಮಳಲು. ಹಾಯಾಗಿ ನಭದ ನೀಲಿಯನ್ನು ನೋಡುತ್ತ "ರಾಮಾ ರಾಮಾ" ಎಂದು ಈಚಿ ನವರು ಮಲಗಿದರೆ ಈ ದಾಸರಿಗೆ ಬ್ರಹ್ಮೇತಿ ಏಕೆ ?

ನನ್ನ ಮನಸ್ಸಿಗೋ ಕಾಯಕ, ಕೆಲಸ, ಕಾರ್ಯ ಏನೇ ಆಗಲಿ; ಒಂದೂ ಸಲ್ಲದು. ಬದುಕೆಂಬದು ಬರಿ ಕಾಯಕವೇ ಆದರೆ ಮನುಷ್ಯನಿಗೂ ಯಂತ್ರಕ್ಕೂ ಅಂತರವೇನು ?

ಕರ್ನಾಟಕ ಆರ್ಥಿಕ ರೀತಿಯಿಂದ ಬಡವಾಗಿರಬಹುದು. ಆದರೆ ವೇಳೆ ಯಿಂದ ಪ್ರತಿಯೊಬ್ಬ ಕನ್ನಡಿಗನು ಉದಾರನೆಂದೇ ಹೇಳಬೇಕು. "ನನಗೆ ವೇಳೆಯಿಲ್ಲ" ಎಂದು ಯಾವ ಕನ್ನಡಿಗನಾದರೂ ಬೊಬ್ಬೆ ಇಟ್ಟಿದ್ದಾನೆಯೇ? ವೇಳೆಯನ್ನು ಧಾರಾಳವಾಗಿ ವೆಚ್ಚ ಮಾಡುವ ಕರ್ಣರೆ ಕರ್ನಾಟಕರು ಎಂಬಲ್ಲಿ ಸಂದೇಹವೇನು ? ಇಂತಹ ಕರ್ಣರ ನಾಟಕವೇ ಕರ್ನಾಟಕ. ಕರ್ನಾಟಕ ಎಂಬುದೇ ಒಂದು ಮಹಾನಾಟಕವೆಂದರೆ ಅದರಲ್ಲಿ ಇಂತಹ ಕಲಿಕರ್ಣರು ನಿರುದ್ಯೋಗವೀರರಾಗಿ ಮೆರೆಯುವ ಮಹಾಪಾತ್ರಗಳು.

ಮುಂಜಾವಿನಿಂದಲೂ ಸಂಜೆಯುವರೆಗೆ ಕಾಯಕ, ಕಾಯಕ ಎಂದು ಹಲುಬಿ, ದುಡಿದು ಬೆವರುಸೂಸಿ ಮಾಡುವದೇನು ? ಮಾಡಿದ್ದೆಲ್ಲಾ ಕೆಟ್ಟ ಕೆಲಸವಾಗಿ ಅಪಕೀರ್ತಿಗೆ ಪಕ್ಕಾಗಿ ಸಮಾಜದಲ್ಲಿ ಕಪ್ಪು ಮುಖಮಾಡಿ ಕೊಂಡು ಓಡಾಡುವದಕ್ಕಿಂತ ಕೆಲಸಮಾಡದೆ ರಾಜನಂತೆ, ನಿರುದ್ಯೋಗಿ ರಾಜನಂತೆ, ಇರುವದು ಎಷ್ಟು ವಿಹಿತ !

ಸೋಮಾರಿತನವೆಂದರೆ ನನಗೆ ಅಚ್ಚುಮೆಚ್ಚು. ಜೀವನದಲ್ಲಿ ನನಗೆ ಸೋಮಾರಿತನದ ಹೊರತು ಇಷ್ಟಾರ್ಥ ಸಿದ್ಧಿಯನ್ನು ಕೊಡುವಂತಹದು ಇನ್ನೊಂದಿಲ್ಲ. ಹಗಲೂ ಇರುಳೂ ಸೋಮಾರಿ ದೇವತೆಯನ್ನು ಈ ದೀನ ಕನ್ನಡ ಭಕ್ತನು ಮೊರೆಯಿಟ್ಟು ಪ್ರಾರ್ಥಿಸಿದುದು ಎಷ್ಟು ಸಲವೋ !

'ಸೋಮಾರಿ' ಶಬ್ದದ ವ್ಯುತ್ಪತ್ತಿ ಏನಿರಬಹುದು ? ಹೇಳಿದುದಕ್ಕೆಲ್ಲ 'ಸೋ' ಎಂಬ 'ಮಾರಿ' ಎಂದೋ? ಅಥವಾ ಸೋಮ + ಅರಿ ಎಂದೋ? ಸೋಮನ ಅರಿಯೊ, ವೈರಿಯೊ ನನಗೆ ಒಂದೂ ಗೊತ್ತಿಲ್ಲ. ನಾನು ಮಾತ್ರ ಸೋಮಾರಿಯ ಮಿತ್ರನಾಗಿದ್ದೇನೆ.

ನಾಳಿನ ಚಿಂತೆ ನಾಳಿಗಿರಲಿ. ಇಂದೇಕೆ ನಾಳಿನ ಕೊರಗು ? ಎಂದು ಕವಿ ತನ್ನ ಒಡನಾಡಿಯನ್ನು ಕರೆದು ಮನವಾರೆ ಜೀವನದ ಸುಖದ ಬಟ್ಟಲು ವೆಂಬ ಸುರೆಯನ್ನು ಸುರಿದು ಜಗತ್ತಿನ ದುಃಖವನ್ನು ಮರೆತು ಓಲಾಡುವ ಧೀರ ಮನೋವೃತ್ತಿ ಯಾರಿಗೆ ಸೇರದು ?

ಇನ್ನೊಬ್ಬ ಕಲಾವಿದ, ಯಾವಾಗಲೂ ತಾನು ಹಾಸಿಗೆಯ ಮೇಲೆ ಕಾದಂಬರಿಯನ್ನು ಓದುತ್ತ ಮಲಗಿರಬೇಕು. ಆದರೆ ಮಗ್ಗುಲಿಗೆ ತನ್ನ ಇನಿ ಯಳು ಬೇಕೆಂದು ಕೋರಿದ್ದಾನೆ.

ನಾನು ಸೋಮಾರಿ ಎಂದೊಡನೆ ನಿಷ್ಕರ್ಮಯೋಗವನ್ನು ಅಂಗೀಕರಿ ಸಿದೆನೆಂದು ತಾವು ಭಾವಿಸಬಾರದು. ಸೋಮಾರಿತನವೆಂದರೆ ಬರಿ ನೈಷ್ಕರ್ಮ ಸಿದ್ಧಿಯೇ ಅಲ್ಲ. ನಿದ್ದೆಮಾಡುವದಾದರೂ ಒಂದು ಕರ್ಮವೇ ! ಎಂದ ಮೇಲೆ ಸಚೇತನ ವಸ್ತುವಾಗಿರುವವರೆಗೂ ಯಾವದೇ ಕರ್ಮದಿಂದ ಬಾಹಿರ ನಾಗಿರುವದು ಹೇಗೆ ಸಾಧ್ಯ ?

ನನಗೆ ಸೋಮಾರಿ ತನವೆಂದರೆ ಇಷ್ಟೆ—ದುಡಿಮೆ ಬೇಡ; ಕಾಯಕ ಬೇಡ. ಈ ದುಡಿಮೆಯ ಸಂಕಷ್ಟವನ್ನು ಪಾರಾಗುವದಕ್ಕಾಗಿ ನಾನು ಎಷ್ಟೋ

ಸಲ ರೋಗಿಯಾಗಲೂ ಬಯಸಿದ್ದೇನೆ. ರೋಗಗಳಲ್ಲಿಯೂ ಸೋಮಾರಿ ಇಚ್ಛಿಸುವ ರೋಗವೇ ಬೇರೆ. ಯಾವುದೆಂದರೆ ಜ್ವರ. ಚಳಿಗಿಂತ ಜ್ವರ ಮೇಲು. ಜ್ವರದ ಕಾವು ಗೋಮರೋಮವನ್ನು ವ್ಯಾಪಿಸಿ ಮೆದುಳಿಗೂ ಅಡರಿದಾಗ ರೋಗಿಯ ಬಾಯಿಂದ ಹೊರಬೀಳುವ ಕಾವ್ಯಸ್ಫೂರ್ತಿಯ ಮಹಾಪೂರವನ್ನು ನೋಡಬೇಕು! ವ್ಯಕ್ತಿಯ ಅಂತರಂಗದ ವ್ಯಾಪಾರವನ್ನು ತಿಳಿದುಕೊಳ್ಳುವದಕ್ಕೆ ಇದೇ ಒಂದು ಕೈಗನ್ನಡಿ ಇದ್ದಂತೆ. ಹೀಗೆ ಜ್ವರ ಬಂದು ಬಡಬಡಿಸುತ್ತ ಮಲಗಿದರೆ ಕಾಯಕವಿಲ್ಲದೆಯೇ ಕಾವ್ಯ ರಚನೆಯಾಗಬಹುದಲ್ಲ—ಎಂದು ನನ್ನ ಕೋರಿಕೆ! ರೋಗಿ ವೇದಾಂತಿಯಾಗಿದ್ದರೆ ಅವನ ಬಾಯಿಂದ ಬರಿ ವೇದಾಂತವೇ ಹೊರಹೊಮ್ಮುವದು. ರೆವಿನ್ಯೂ ಕಾರಕೂನನಾಗಿದ್ದರೆ ಬರಿ ಲಂಚದ ಮಾತೇ ಪುಟಿದು ಬರುವವು. ಅಂತೂ ಕಾಯಕವಿಲ್ಲದ ಸಾಹಿತ್ಯ ವ್ಯವಸಾಯವಲ್ಲವೇ ಇದು! The poet sings and the world over hears.' ಕವಿ ತಾನೇ ತಾನಾಗಿ ನುಡಿಯುತ್ತಿರುವಾಗ ಕೇಳಿದವರು ಲೇಖಿಸಿಕೊಳ್ಳಬಹುದು. ಕುಮಾರವ್ಯಾಸನೂ ಹೀಗೇ ಮುಕ್ತಕಂಠದಿಂದ ಹಾಡಿದನೆಂದು ಹೇಳುತ್ತಾರೆ. ಅವನೂ ನಮ್ಮ ವರ್ಗದವನೇ ಎನ್ನೋಣ. ಆದರೆ ಅವನದು ಒಡನುಡಿಯಾದರೆ ನಮ್ಮದು ಬಡಬಡಿಕೆ ಯಾದೀತು ಅಷ್ಟೆ.

ನನ್ನದೇ ಒಂದು ಕೋಣೆಯಾಗಿರಬೇಕು. ಹಾಸಿಗೆಯ ಸುತ್ತಲೂ ಪುಸ್ತಕಗಳು ಹರವಿರಬೇಕು. ಕೈಚಾಚಿದಲ್ಲೊಂದು ಭಾವಗೀತ, ಉತ್ತಮ ಕಾದಂಬರಿ ಕೈಗೆ ಹತ್ತಬೇಕು. ತಲೆಗೆ ಒಂದು ದೀಪ, ಶಾಂತವಾಗಿ ಉರಿಯುತ್ತಿರಬೇಕು. ಹಾಗೆ ಓದುತ್ತ ಹಾಯಾಗಿ ಮಲಗಬೇಕು. ಮೇಲೆ ಹೇಳಿದ ಕಲಾವಿದನ ಹಾಗೆ ನನಗೆ ಮಾತ್ರ ಒಡನಾಡಿಗಳಾರೂ ಬೇಡ. ಸಂಸಾರ ತಾಪತ್ರಯವನ್ನು ಮರೆಯುವದಕ್ಕೆಂದೇ ನಾನು ಈ ಸೋಮಾರಿತನಕ್ಕೆ ಮೊರೆಹೊಕ್ಕಾಗ ಮತ್ತೆ ಅಲ್ಲಿಯೂ ಒಡನಾಡಿ ಎಂದರೆ? ಮತ್ತೆ ಸುರುವೆ ನಾಳಿನ ಹಾಳು ಸಂಸಾರದ ಎಣಿಕೆನೆನಕೆಗಳು. ಅಂತೇ ನಿದ್ರೆ ಬರುವವರೆಗೂ ಓದಬೇಕು; ಎಚ್ಚರವಾಗುವವರೆಗೂ ಮಲಗಬೇಕು. ಎದ್ದಾಗ ತಲೆದಿಂಬಿಗೆ ಉಪಃಪಾನ ಸಿದ್ಧವಾಗಿರಬೇಕು. ಅದಷ್ಟು ಪ್ರಾಶನ ಮಾಡಿ ಮತ್ತೆ ಹಾಗೇ ಶೇಷಶಾಯಿಯಂತೆ ವಿಶೇಷ ಶಾಯಿಯಾಗಿ ಮಲಗಿ

ಬಿಡಬೇಕು. ಹೊರಗಿನ ಜಗತ್ತು, ಹೊರಗಿನ ಶಬ್ದ ಒಂದೂ ಬೇಡ ! ನಿದ್ರೆಯೊಂದೇ ಎಲ್ಲ ಸಾಂಸಾರಿಕ ರೋಗಕ್ಕೂ ರಾಮಬಾಣವಾಗಬೇಕು.

ಒಂದು ದಿನ ಮಧ್ಯಾಹ್ನ ಕಚೇರಿಗೆ ಹೊತ್ತಾಗಿತ್ತು. ಮನೆಯಲ್ಲಿ ಹಬ್ಬದ ಊಟವಾಗಿತ್ತು. ಅಧಿಕಾರಿಗಳು ಮತ್ತೆ ಎಲ್ಲಿ ಬೈಗುಳಗಳ ಉಡುಗರೆ ಕೊಡುವರೋ ಎಂಬ ಭಯ. ತೇಕುತ್ತ ಏದುತ್ತ ಕಚೇರಿಯತ್ತ ಧಾವಿಸುತ್ತಿದ್ದೆ. ಜೀವನಯಂತ್ರದಲ್ಲಿ ಜೀವ ಒದ್ದಾಡಿ ಹೋಯಿತು.

ಮಧ್ಯದಲ್ಲಿ ಒಂದು ವಿಶಾಲವಾದ ಬೇವಿನ ಮರ. ಆಚೆಗೆ ಕಾಣುವ ದೂರಿನ ಗುಡ್ಡ. ಅದರಾಚೆಗೆ ಹಸಿ ತುಂಬಿದ ಕೊಳ್ಳ. ಬೇವಿನ ಮರದ ಸುತ್ತಲೂ ತುಂಬಿ ಬೆಳೆದ ಎಳೆ ಹಸುರು. ಸುತ್ತಲೂ ದನಗಳು ಮೇಯುತ್ತಿದ್ದವು. ಕರೆಗಳು ಓಡಿಬಂದು ತಾಯಿಯ ಬಳಿ ಹುದುಗುತ್ತಿದ್ದವು. ದನಗಾಯಿ ಬೇವಿನ ಮರದಡಿ ಮಲಗಿ ತನ್ನ ಹಿಗ್ಗನ್ನೇ ಕೊಳಲಿನಿಂದ ನುಡಿಸುತ್ತಿದ್ದ. ದನ ಕಾಯುವದೆಂದರೆ ನಮಗೊಂದು ಬೈಗುಳದ ಗಾದೆಯ ಮಾತು. ಈ ನಿಶ್ಚಿಂತ ಸುಖ ಸಿಗಬೇಕಾದರೂ ಪಡೆದು ಬರಬೇಕು ಎನಿಸಿತು.

# ನಾನು ಕ್ಷಿತಿಜದ ಮೇಲಿದ್ದಾಗ

ರಸಿಕವಾಚಕರೆ, ಶೀರ್ಷಿಕೆ "ಕ್ಷಿತಿಜ"ದ ಮೇಲಿದ್ದಾಗ, "ಪ್ರೀತಿಯ" ಮೇಲಿದ್ದಾಗ ಅಲ್ಲ. ಮೊದಲೇ ಈ ಎಚ್ಚರಿಕೆ ಇರಲಿ. ಆ ಮೇಲೆ ನಮ್ಮ ನಿಮ್ಮ ನಡುವೆ ತಪ್ಪು ತಿಳುವಳಿಕೆ ಬೇಡ.

ಹಗುರಾಗಿ ಪ್ರವಾಸ ಮಾಡುವುದು ನನ್ನೊಡನೆಯೇ ಮೈಗೂಡಿ ಬಂದ ಹುಟ್ಟುಗುಣ; ಕೇವಲ ಯುದ್ಧ ಕಾಲದ ಸೌಕರ್ಯವಲ್ಲ. ಹಗುರಾಗಿ ಪ್ರವಾಸ ಮಾಡುವುದೆಂದರೇನು ಎಂದು ಉಟ್ಟ ಧೋತರದ ಹೊರತಾಗಿ ಇನ್ನೊಂದು ಉಡಿಗೆ ಇಲ್ಲ; ಹೊದಿಕೆ ಇಲ್ಲ ಏನೊ ಬಹಳ ದೂರದ ಬಹು ಕಾಲದ ಪ್ರವಾಸವೆಂದಿದ್ದರೆ ಬಗಲೊಳಗೊಂದು ಚಾದರು. ನಿತ್ಯದ ಮುದ್ರೆಯ ಪೆಟ್ಟಿಗೆಯನ್ನು ಕೂಡ ಒಯ್ಯಲು ನನಗೆ ಭಾರ. ಚಾದರವೊಂದಿದ್ದರೆ ಒಂದು ಜಮಖಾನೆ ಎಲ್ಲಿಯಾದರೂ ದೊರೆಯುವುದೆಂಬ ಭರವಸೆ ಹೇಗಿರುತ್ತದೋ, ಹಾಗೆಯೇ ಕಿಸೆಯಲ್ಲಿ ಒಂದು ಹೊಸ " ಏಳು ಗಂಟೆಯ ಬ್ಲೇಡು " ವೊಂದಿದ್ದರೆ ಉಳಿದ ಸಾಧನ ಸಾಮಗ್ರಿ ತಾನೆ ದೊರೆಯುವುದೆಂಬ ಆತ್ಮವಿಶ್ವಾಸವಿರುತ್ತದೆ

ನಮ್ಮ ಬೀಗರ ಮನೆಗೆ ಹೋಗುವಾಗ ಸಹ ನಾನು ಇಷ್ಟೆ ಹಗುರಾಗಿ ಹೋಗಿದ್ದೇನೆ. ಹೋಗುತ್ತಿದ್ದೇನೆ. ಓ, ಬೀಗರ ಮನೆಗೆ ಹೀಗೆ ಹೋಗುವುದೇನು ಮಹಾ ವಿಷಯ. ಏಕೆಂದರೆ ಹೆಣ್ಣಿನ ಬೀಗರ ಮನೆಯೆಂದರೆ ಬಾಡಿಗೆಯಿಲ್ಲದ ಟಿ. ಬಿ. ಎಂದು ಮಗು ಕೂಡ ಹೇಳಬಹುದು. ಉಟ್ಟ ಧೋತರವೇಕೆ ದಿಗಂಬರರಾಗಿ ಹೋದರೂ ಸಕಲ ಸೌಕರ್ಯಗಳನ್ನೊದಗಿಸುವುದು ಅವರ ಕರ್ತವ್ಯವೆಂದು ಬೇರೆ ಹೇಳಬೇಕಾಗಿಲ್ಲ.

ಅಥವಾ ನಾನು ಎಂದಿನಿಂದಲೂ ಸತತವಾಗಿ ಬೀಗರ ಮನೆಗೆ ಹೋಗುವ ಅಭ್ಯಾಸದ ಬಲದಿಂದಲೊ ಏನೋ, ನನ್ನ ಗೆಳೆಯರ ಉಳಿದ ಬಳಗದವರ ಮನೆಗೆ ಹೋದಾಗಲೂ " ಏನೋ ಬೀಗರ ಮನೆಗೆ ಬರೋ

ಹಾಗೆ ಬಂದೀಯಲ್ಲ ಶುದ್ಧ ಬರಿಗೈಯಿಂದ" ಎಂದು ಬೈಯಿಸಿಕೊಂಡಿದ್ದೇನೆ. ನಾನು ಈ ವಿಷಯದಲ್ಲಿ ಬಹಳ ಗಟ್ಟಿಗನೆಂದೇ ಹೇಳಬೇಕು. ಇಷ್ಟಾದರೂ ನಾನು ಹಗುರು ಪ್ರವಾಸ ಮಾಡುವ ಚಟವನ್ನು ಬಿಟ್ಟುಕೊಟ್ಟಿಲ್ಲ. ಸಾಮಾನ್ಯವಾಗಿ ನಾನು ಇಂದಿನವರೆಗೆ ಎಲ್ಲ ಸಾಹಿತ್ಯ ಸಮ್ಮೇಲನಗಳನ್ನೂ ಸಂದರ್ಶಿಸಿದ್ದೇನೆ. ಚಳಗಾಲದಲ್ಲಿಯೇ ಕನ್ನಡ ಸಾಹಿತ್ಯ ಸಮ್ಮೇಲನಗಳಿರುತ್ತವೆಯೆಂಬುದು ಒಂದೂವರೆ ಕೋಟಿ ಕನ್ನಡಿಗರಿಗೆ ಗೊತ್ತಿದ್ದ ವಿಷಯ. ಸಮ್ಮೇಲನದ ಮುಂಚೆಯೇ ಬರುವ ಪ್ರತಿನಿಧಿಗಳಿಗೆ ಹಾಸಿಗೆ ಹೊದಿಕೆಗಳನ್ನು ಈಡಾಗಿ ತರಬೇಕೆಂದು ಊರೂರವರು ಕೊಟ್ಟ ಎಚ್ಚರಗಳನ್ನು ಗಮನಿಸುತ್ತಲೂ ಹಾಗೆಯೇ ಹೋಗುತ್ತಿರುವ ಈ ಕೆಚ್ಚಿದೆಯ ಕನ್ನಡಿಗನಿಗೆ ಏನೆನ್ನುವಿರಿ? ಮಲಗಲು ಸ್ಥಳ, ಹಾಸಲು ಜಮಖಾನೆ ಎಲ್ಲಿಯೂ ದೊರೆಯುವುದಿಲ್ಲವೆಂದರೂ ಸಮ್ಮೇಲನಗಳ " ಬುಕ್‌ಸ್ಟಾಲಿ "ನಲ್ಲಿಯೇ ಮಲಗಿ ಕಾಳರಾತ್ರಿಯನ್ನು ಕಳೆದೇನೆಂಬ ಆತ್ಮವಿಶ್ವಾಸ ನನಗೆ. " ಬುಕ್ ಸ್ಟಾಲಿನವರೂ ನಿಮ್ಮ ಬೀಗರೊ ?" ಎಂದೆನ್ನಬಹುದು ನೀವು. "ಸ್ವಾಮಿ, ಆರಾಣೆ-ಎಂಟಾಣೆಯ ಪುಸ್ತಕ ವ್ಯಾಪಾರ ಮಾಡಿದಾಗ ಬೀಗರಾಗದೆ ಏನು ಪಠಾಣರಾಗುತ್ತಾರೆಯೇ ?" ಎಂದೇ ನನ್ನ ಉತ್ತರ. ಎಷ್ಟೋಸಲ ಇಷ್ಟು ವ್ಯಾಪಾರ ಇಲ್ಲದೆ ಅವರ ಪುಸ್ತಕ ಪ್ರದರ್ಶನಕ್ಕೆ ಗಮನ ಕೊಟ್ಟು ನಾಲ್ಕು ಬೆಲ್ಲದಂತಹ ಮಾತನಾಡಿದರೆ ಸಾಕು, ನಾಲ್ಕು ಗೇಣು ಬೆಚ್ಚಗಿನ ಸ್ಥಳ ಅವರಿಂದ ಬಂತೆಂದೇ ತಿಳಿಯಿರಿ. ತಲೆಗೆ ದಿಂಬು ಇಲ್ಲದಿದ್ದರೂ ನಾಲ್ಕು "ಬಾಲಪ್ರಪಂಚ "ಗಳನ್ನು ನಿಮ್ಮ ತಲೆಗಿಟ್ಟು ಹಾಯಾಗಿಸುತ್ತಾರೆ. ಇಷ್ಟೆಲ್ಲ ಸೌಕರ್ಯ ಗಳಿಸಿಕೊಳ್ಳಬೇಕಾದರೆ ಹುಟ್ಟು ಜಾಣಾಕ್ಷನಿರಬೇಕೆಂಬ ಮಾತನ್ನು ಹೇಳುವ ಕಾರಣವಿಲ್ಲ.

" Travel as you like " ಹೋಗಿ " Travel-light " " ಅವಶ್ಯವಿದ್ದರೆ ಮಾತ್ರ ಪ್ರವಾಸ ಮಾಡಿರಿ"ಎಂಬ ಉಪದೇಶದ ಕಾಲವಿದು. ಅಂಗಡಿಕಾರ " ಅವಶ್ಯವಿದ್ದರೆ ಮಾತ್ರ ಸರಕು ಒಯ್ಯಿರಿ " ಎಂದು ಹೇಳುವುದೂ ಉಂಟೆ? ಉಂಟೆಂದು ಹೇಳಬೇಕಾಗುತ್ತದೆ, ಈಗಿನ "ಕಂಟ್ರೋಲ್" ಕಾಲದಲ್ಲಿ. (ಈ ಇಷ್ಟೆಲ್ಲ ಕಂಟ್ರೋಲ್ ಹಾಕುವದಕ್ಕಿಂತ ಸರಕಾರ "ಬರ್ಥ ಕಂಟ್ರೋಲ್ " ಒಂದನ್ನೇ ರಾಮಬಾಣದಂತೆ ಪ್ರಯೋಗಕ್ಕೆ ತಂದಿದ್ದರೆ

ಎಷ್ಟು ಒಳಿತಾಗುತ್ತಿತ್ತು!) ಬಹುಶಃ ಹಗುರಾಗಿ ಪ್ರವಾಸ ಮಾಡಬೇಕೆಂಬ ಕಲ್ಪನೆ ರೈಲು ಕಂಪೆನಿಯವರ ಸೂಕ್ಷ್ಮಮತಿಗೆ ಹೊಳೆದಿದ್ದರೆ, ಅದಕ್ಕೆ ನಾನೇ ಕಾರಣನೆಂದು ಹೇಳಿದರೆ ನೀವು ನಂಬದಿರುವುದಕ್ಕೇನು ಕಾರಣವಿಲ್ಲ.

ನಾನು "ಫಿರ್ತಿ"ಯ ಮೇಲಿದ್ದಾಗ ಯಾವಾಗಲೂ ಪ್ರವಾಸಮಾಡುವುದು ಹಗುರಾಗಿಯೆ. ಸರಕಾರಿಯ ಫಿರ್ತಿಯೇ ಇರಲಿ, ಖಾಸಗಿ ಫಿರ್ತಿಯೇ ಇರಲಿ, "ನಾಡಹಬ್ಬ"ದ ಫಿರ್ತಿಯೇ ಇರಲಿ ನಾನು ಪ್ರವಾಸ ಮಾಡುವುದು ಯಾವಾಗಲೂ ಹಗುರಾಗಿಯೆ. ಒಬ್ಬೊಬ್ಬರನ್ನು ನಾನೂ ನೋಡಿದ್ದೇನೆ. ಹುಬ್ಬಳ್ಳಿಯಿಂದ ಧಾರವಾಡಕ್ಕೆ ಉಪನ್ಯಾಸಕ್ಕೆಂದು ಬಂದಿರುತ್ತಾರೆ. ಅವರೊಡನೆ ಒಂದು ಸಣ್ಣ "ಯೂನಿವರ್ಸಿಟಿ ಲೈಬ್ರಿ"ಯೇ ಇರುತ್ತದೆ, ಅದಲ್ಲದೆ ಕೈಯೊಳಗಿನ ಚೀಲದಲ್ಲಿ ಕೆಲವಷ್ಟೆ ಮುಖ್ಯ ಗ್ರಂಥಗಳು, ಬಗಲಲ್ಲಿ ನಾಲ್ಕೈದು ವಾರ (War ಅಲ್ಲ) ಪತ್ರಿಕೆಗಳು. ಇಷ್ಟಾಯಿತೆ, ಒಂದು ವಿಶ್ವವ್ಯಾಪಿಯಾದ Holdall ಉ, ಸೂಟಕೇಸು ಅಂತೂ ಸರಿಯೇ. ಆ ಸೂಟಕೇಸಿನಲ್ಲಿ ಕನಿಷ್ಟ ಹತ್ತೆಂಟು ಶರ್ಟು, ನಾಲ್ಕಾರು ಸೂಟು-ಒಂದೆರಡು ಜೋಡು ಬೂಟು (ಕೆಲವರು ಬೂಟಿಗಾಗಿ ಪ್ರತ್ಯೇಕ ಚೀಲ ಮಾಡಿರುತ್ತಾರೆ. ಇಲ್ಲವೆ "ಸರ್ವವ್ಯಾಪಿ" ಹೋಲ್ಡಾಲ್ ಅಂತೂ ಸರಿಯೆ.), ಟೂಥ್‌ಬ್ರಶ್, ಟೂಥ್ ಪೇಸ್ಟ್, ವಾಟರ ಬ್ಯಾಗ್, ಷೇವಿಂಗ ಸೆಟ್, ಅದಕ್ಕಾಗಿ ಒಂದು ಕಪ್ಪು ಬಿಸಿನೀರು-ಇತ್ಯಾದಿ ಇತ್ಯಾದಿ ಸಾಮಾನಗಳಂತೂ ಸರಿಯೆ. ಇದು ಮಹಾಜನರ ಪಂಥವಾಯಿತು. ಇಷ್ಟೊಂದು ದರ್ಬಾರು ನಮಗೇಕೆ ?

ಆದರೂ ನನ್ನಲ್ಲಿ ಒಂದು ಚಟ ಮಾತ್ರ ಇದೆ. ಓದಲಿ ಬಿಡಲಿ, ನಾಲ್ಕೈದು ಗ್ರಂಥಗಳನ್ನು ಮಾತ್ರ ಸಂಗಡ ಒಯ್ಯುವುದು. ಅವೂ ಪತ್ರಿಕೆಗಳಿಗೆ ವಿಮರ್ಶೆ ಮಾಡತಕ್ಕಂತಹ ಗ್ರಂಥಗಳು. ವೇಳೆಯಿಂದ ಬಡವನಾದ ನನಗೆ ಪುಸ್ತಕ ವಿಮರ್ಶೆಗಾಗಿ ಪ್ರವಾಸದ ಕಾಲಕ್ಕೆ ವೇಳೆ ಕೊಡದ ಹೊರತು ಗತಿಯಿಲ್ಲ. ಒಮ್ಮೊಮ್ಮೆ ವಿಮರ್ಶೆ ಬಹಳ ಬಾಕಿ ಉಳಿದಾಗ ಅದಕ್ಕಾಗಿಯೇ ಪ್ರವಾಸ ಕೈಕೊಳ್ಳುವ ಹೊತ್ತು ಬಂದರೂ ಬರಬಹುದು. ಆದರೆ ಈ ಮಾತೂ ಸಿದ್ಧ. ಯಾವ ಯಾವಾಗ ನಾನು ಗ್ರಂಥಗಳನ್ನು ವಿಮರ್ಶೆಗೆಂದು ಒಯ್ದಿರುತ್ತೇನೊ ಪ್ರವಾಸ ಮುಗಿಸಿ ಬರುವತನಕ ಅವು ಭದ್ರವಾಗಿಯೇ ಬ್ಯಾಗಿನಲ್ಲಿ ಉಳಿದಿರುತ್ತವೆ. ಒಯ್ದಿದ್ದೆನಲ್ಲ ಎಂಬುದೊಂದೇ ಸಮಾಧಾನ. ಅಲ್ಲದೆ

ಉಳಿದ ಕಾಲ ಪುಕ್ಕಟೆ ಕಳೆದರೂ ನಾಲ್ಕು ಜನ ಸಹಪ್ರವಾಸಿಗರ ಮುಂದೆ —ಈ ಮನುಷ್ಯ ಎಷ್ಟು ಓದುತ್ತಾನಲ್ಲ ಎಂಬ ಛಾಪನ್ನಾದರೂ ಹಾಕಿರುವೆ ನೆಂಬುದೂ ಅಷ್ಟು ಸಂತೋಷ.

ಪ್ರವಾಸದಲ್ಲಿ ಪುಸ್ತಕ ವಿಮರ್ಶೆ ಮಾಡುವ ದುರ್ಗುಣವನ್ನು ನಾನು ನನ್ನೊಬ್ಬ ಮಿತ್ರರಿಂದ ಕಲಿತುಕೊಂಡಿದ್ದೇನೆ. ಅವರು ತಮ್ಮ ಪುಸ್ತಕಾಲಯ ವನ್ನು ಜ್ವರ ಬಂದಾಗ ಹಾಸಿಗೆಯ ಮೇಲೆ ಒರಗಿ ಓದುವ ಗ್ರಂಥಗಳು, ವಿರಹದಲ್ಲಿ ಓದುವ ಗ್ರಂಥಗಳು, ಪ್ರಣಯ ಕಾಲದಲ್ಲಿ ಓದುವ ಗ್ರಂಥಗಳು, ಊಟದ ಕಾಲಕ್ಕೆ ಓದುವ ಗ್ರಂಥಗಳು, ತಿರುಗಾಟ (Walking) ದಲ್ಲಿ ಓದುವ ಗ್ರಂಥಗಳು, ಊಟವಾಗಿ ಆಫೀಸಿಗೆ ಹೋಗುವಾಗ ಓಣಿಯಲ್ಲಿ ಓದುವ ಗ್ರಂಥಗಳು—ಇತ್ಯಾದಿ ಇತ್ಯಾದಿಯಾಗಿ ಅನೇಕ ವಿಧವಾಗಿ ವಿಭಾ ಗಿಸಿ ವಿಂಗಡಿಸಿಟ್ಟಿದ್ದಾರೆ. ನಾನು ಇಷ್ಟೊಂದು ದಕ್ಷನಲ್ಲದ್ದರಿಂದ ಪ್ರವಾಸ ಗ್ರಂಥವೊಂದನ್ನೇ ಅವರಿಂದ ಸ್ವೀಕರಿಸಿದ್ದೇನೆ.

ಎಷ್ಟೋ ಸಲ ನಾನು ಪ್ರವಾಸ ಮಾಡುವಾಗ ಓದುವುದಕ್ಕಿಂತ ಬರೆ ಯುವುದೇ ಹೆಚ್ಚು. ಏಕೆಂದರೆ ಮಹಾತ್ಮಾ ಗಾಂಧಿಯವರ ಎಷ್ಟೋ ಲೇಖನ ಗಳು In train ಎಂದೇ ಬರುವುದಿಲ್ಲವೆ ? ಗಾಡಿಯಲ್ಲಿ ನಾನು ಬರೆಯ ಬೇಕಾದರೆ ಕನಿಷ್ಟ ಎರಡನೆಯ ವರ್ಗದಲ್ಲಿಯಾದರೂ ನಾನು ಸಂಚಾರ ಮಾಡುತ್ತಿರಬೇಕೆಂದು ನೀವು ಎಣಿಸಬಹುದು. ಮೂರನೆಯ ವರ್ಗದಲ್ಲಿ ಪ್ರಯಾಣ ಮಾಡಿಯೇ ನಾನು ಬರವಣಿಗೆಯನ್ನು ಸಾಗಿಸುತ್ತೇನೆಂದು ಹೇಳ ದಿದ್ದರೆ ನನ್ನ ವೈಶಿಷ್ಟ್ಯವೆಲ್ಲಿ ? ನನ್ನ ಎಷ್ಟೋ ಹರಟೆಗಳ ಕಾರಖಾನೆಯೂ ಅಷ್ಟೆ ತೀವ್ರವಾಗಿ ಸಾಗುತ್ತದೆ. ಸದ್ಯದ ಸರಕೂ ಇಂತಹ ಕಾರಖಾನೆ ಯಿಂದಲೇ ಹೊರಬಿದ್ದುದೆಂಬದನ್ನು ನೀವು ಮರೆಯಬಾರದು. ಈ ಸಾಲು ಗಳನ್ನು ಬರೆಯುವಾಗ ನಾನು ರೈಲಿನ ಮೂರನೆಯ ವರ್ಗದಲ್ಲಿಯೇ ಕುಳಿತಿ ದ್ದೇನೆ. ನನ್ನ ಅಕ್ಕಪಕ್ಕದವರು ಅಚ್ಚರಿಯಿಂದ ನನ್ನ ಕಡೆಗೆ ನೋಟ ಬೀರಿ ತಮ್ಮ ತಮ್ಮೊಳಗೆ ಕಿವಿಕಚ್ಚುತ್ತಿದ್ದಾರೆ; ನಾನಿಲ್ಲಿ ಹರಟೆ ಕೊಚ್ಚುತ್ತಿದ್ದೇ ನೆಂಬುದು ಅವರಿಗೇನು ಗೊತ್ತು ? ಟಿಕೆಟ್ ಕಲೆಕ್ಟರನು ಸಹ ನನ್ನ ಆವೇ ಶದ ಬರವಣಿಗೆ ನೋಡಿ ಹಾಗೇ ಹೋಗಿಬಿಟ್ಟಿದ್ದಾನೆ. ಒಂದೊಂದು ಸಲ "ಟಿಕೆಟ್ ಇಲ್ದೆ ಟ್ರಾವಲ್" ಮಾಡಲಿಕ್ಕೂ ಈ ವೇಷ ಉಪಯುಕ್ತವಲ್ಲವೆ?

ನಾನು ಎಲ್ಲಿಯಾದರೂ ಉಪನ್ಯಾಸಕ್ಕೆ ಹೊರಟೆನೆಂದರೆ ವಿಷಯ ಸಿದ್ಧತೆ ಮಾಡುವುದು ಪ್ರವಾಸದಲ್ಲಿಯೇ. ಎರಡು ವಾರ ಮೊದಲೇ ನನಗೆ ಆಮಂತ್ರಣ ಬಂದಿರುತ್ತದೆ. ಇನ್ನೂ ಎರಡು ವಾರ ಇದೆಯಲ್ಲ—ಎನ್ನುತ್ತ ಹೊರಡುವ ವೇಳೆಯವರೆಗೂ ಕಾಲಹರಣವಾಗಲೇಬೇಕು. ಅಂತೂ ಕೊನೆಗೆ ವಿಷಯಸಿದ್ಧತೆ ನಡೆಯುವುದು ಗಾಡಿಯಲ್ಲಿಯೇ. ಗಾಡಿಯ ಓಟಕ್ಕೆ ವಿಚಾರಗಳ ಓಟ ತಾಳಹಾಕಿ ಸಾಗುತ್ತದೆ. ಒಮ್ಮೆ ಸಮೀಪದ ಒಂದು ಊರಿಗೆ ಉಪನ್ಯಾಸಕ್ಕೆ ಹೋಗಬೇಕಾದಾಗ ನಮ್ಮ ವಿಷಯ ಸಿದ್ಧತೆ ವೇಗವಾಗಿ ಸಾಗಿತ್ತು. ನನ್ನ ಬಳಿಗೇ ಆ ಊರಿನ ಕಾರ್ಯದರ್ಶಿಗಳು ಕೂತಿದ್ದರೆಂಬುದು ಆ ಊರ ನಿಲ್ದಾಣ ಮುಟ್ಟಿ ಅವರು ನನ್ನನ್ನು ಕೈಕುಲುಕಿಸಿದಾಗಲೇ ಗೊತ್ತು. ಆ ಮೇಲೆ ಪೆಚ್ಚನಾಗಿ ಮಾಡುವುದೇನು ? "ಕ್ಷಮಿಸಿ" ಎಂದೆ. ಉಪನ್ಯಾಸಕರ ಹೂರಣ ಎಲ್ಲಿ ಹೊರಬಿತ್ತೋ ಎಂಬ ಭಯ ಮಾತ್ರ ಉಪನ್ಯಾಸ ಮುಗಿಸುವವರೆಗೂ ನನ್ನಲ್ಲಿ ಇದ್ದೇ ಇತ್ತು. ಸಿದ್ಧತೆ ಮಾಡದೆ ಉಪನ್ಯಾಸ ಸಾಧ್ಯವಿಲ್ಲ, ನಿಜ. ಆದರೆ ಸಿದ್ಧತೆ ಮಾಡಿ ಉಪನ್ಯಾಸ ಮಾಡುತ್ತಾರೆಂದು ತಿಳಿದರೆ ಅಪಹಾಸ್ಯವೆಂಬುದೂ ಸುಳ್ಳಲ್ಲ.

ಮೂರನೆಯ ವರ್ಗದಲ್ಲಿ ಪ್ರಯಾಣ ಮಾಡುವುದೇ ನನಗೆ ಯಾವಾಗಲೂ ಮೆಚ್ಚಿಗೆಯೆಂದು ನಿಮಗೆ ತಿಳಿದಿರಬೇಕಷ್ಟೆ? ಯುದ್ಧ ಕಾಲದಲ್ಲಿಯೂ ಮೂರನೆಯ ವರ್ಗದಲ್ಲಿಯೆ ಪ್ರಯಾಣಮಾಡಿದ ಬಂಟ ನಾನೆಂದು ಹೇಳಿಕೊಳ್ಳಲು ನನಗೆ ಅಭಿಮಾನವೆನಿಸುತ್ತದೆ. ಸರಿ, ಅಭಿಮಾನವೆಲ್ಲಿಯದು ಬಂತು? ಕೈಬಿಚ್ಚಿ ಖರ್ಚು ಮಾಡದ ವ್ಯಕ್ತಿ ಎಂದು ನೀವು ಎಣಿಸಬಹುದು. ಆದರೆ " ಇಂಟರ್ ಟಿಕೆಟ್ ಕೊಂಡಾಗಲೂ ನಾನು ಮೂರನೆಯ ವರ್ಗದಲ್ಲಿಯೇ ಪ್ರಯಾಣ ಮಾಡಿದ್ದೇನೆ"ಂದು ಹೇಳಿದಾಗಲೂ ನನ್ನ ಧಾರಾಳತನವನ್ನು ಒಪ್ಪುವಿರಷ್ಟೆ ? ಇಂಟರ್ ಟಿಕೆಟ್ ಕೊಂಡಿದ್ದೇನಲ್ಲ ಎಂಬ ಅಭಿಮಾನಕ್ಕಾಗಿ ಸ್ಥಳ ಸಿಗದಾಗ ನಿಂತುಕೊಂಡಾದರೂ ಇಂಟರ್‌ನಲ್ಲಿಯೇ ಪ್ರವಾಸ ಮಾಡುವುದಕ್ಕಿಂತ ಬೇಕಾದಷ್ಟು ಸ್ಥಳ ಥರ್ಡ್‌ಕ್ಲಾಸಿನಲ್ಲಿ ದೊರೆಯುವಾಗ ಇಂಟರ್ ಇದ್ದರೇನು ಸೆಕಂಡ್‌ಕ್ಲಾಸ್ ಇದ್ದರೇನು ಸ್ಥಳ ಸಿಕ್ಕಲ್ಲಿ ಕೂತರೆ ಸಾಲದೆ ?

ನನ್ನ ಥರ್ಡ್‌ಕ್ಲಾಸ್ ಪ್ರಯಾಣಕ್ಕೆ ಅನೇಕ ಕಾರಣಗಳುಂಟು. ಒಂದೇ

ನಾನು ಸಾಹಿತಿಯೇ ಆಗುತ್ತಿದ್ದಿಲ್ಲ. ಈಗಲಾದರೂ ನಂಬುವಿರಾ ? ದಲಿತರಿಗಾಗಿ ಸಾಹಿತ್ಯವೆಂದು ಹೇಳಹೊರಟ ನಾವು ಉಪ್ಪರಿಗೆಯಲ್ಲಿ ಪ್ರವಾಸ ಮಾಡಿದರೆ ನಮ್ಮ ಕಣ್ಣು ಕಾಣಬೇಕೇನು ?

ಥರ್ಡ ಕ್ಲಾಸಿನಲ್ಲಿ ಥರ್ಡಕ್ಲಾಸ್ ಜನರೇ ಇರುತ್ತಾರೆಂದು ಬೇರೆ ಹೇಳಬೇಕಾಗಿಲ್ಲ. ಎಡಕೊಬ್ಬ ಮುತ್ಯಾಳು, ಬಲಕೊಬ್ಬ ಕಟ್ಟ್ಯಾಳು ಇಂತಹ ವೀರ ಒಕ್ಕಲಿಗರ ಇತ್ತಂಡದಲ್ಲಿ ಸಿಲುಕಿ ಸ್ಥಳ ಸಾಲದೆ ಒದ್ದಾಡಿದ್ದೇನೆ. ಆದರೂ ಅವರ ಸಂಭಾಷಣೆಗಳಲ್ಲಿ ಪ್ರತಿಬಿಂಬಿತವಾದ ಅವರ ಪ್ರಪಂಚದ ರೀತಿಯನ್ನು ಕಂಡು ಸಾರ್ಥಕಪಟ್ಟುಕೊಂಡಿದ್ದೇನೆ. ಕ್ಷಣಕ್ಕೊಮ್ಮೆ "ರಾಯರ, ಕಡ್ಡಿ ಐತೇನ್ರಿ ?" ಎಂದು ಕೇಳುವವರಿಗೆ ವಿಷಾದಪಟ್ಟುಕೊಂಡು ಇಲ್ಲವೆಂದು ಗೋಣು ಹಾಕಿಹಾಕಿ ಗೋಣು ನೊಂದುದೂ ನೆನಪಿದೆ. ಇಂತಹರಿಗಾಗಿಯೇ ಒಂದು "ಕಡ್ಡಿ ಪಟ್ಟಣ" (ಏನು "ಲಂಕಾ ಪಟ್ಟಣ"ವೊ ?) ಇಟ್ಟುಬಿಡಬೇಕೆಂದೂ ವಿಚಾರಮಾಡಿದ್ದೇನೆ. ಒಮ್ಮೊಮ್ಮೆ ಸ್ಥಳದ ಅಭಾವಕ್ಕಾಗಿ ಬಡಿದಾಟ ಮಾಡುವ ಪ್ರಸಂಗ ಬಂದಾಗ ಈ ಅನಾಗರಿಕರು ಇಂತಹ ಇಮ್ಮಡಿ ಪದವೀಧರನಿಗೆ ಅಪಮಾನ ಮಾಡುತ್ತಿರುವರಲ್ಲವೇ ಎಂದು ಮಮ್ಮಲ ಮರುಗಿದ್ದೂ ಉಂಟು ಈ ಅಪಮಾನ ಇನ್ನೊಂದು ಹರಟೆಗೆ ಸ್ಫೂರ್ತಿಕೊಟ್ಟಾಗ ಅದರ ಸಾರ್ಥಕತೆಗೆ ಸಮಾಧಾನಪಟ್ಟುಕೊಂಡುದೂ ಉಂಟು. ಆದರೆ ಸ್ಥಳಕ್ಕಾಗಿ ಬೇರಿಬ್ಬರು ಬಡಿದಾಡುವಾಗ "ಸ್ವಾಮಿ, ಕ್ಷಣಿಕ ಹೊತ್ತಿನ ಗೇಣು ಸ್ಥಳಕ್ಕಾಗಿ ಯಾಕೀ ಬಡಿದಾಟ? ಯಾರ ಮಾಲಕಿಯದೀ ಸ್ಥಳ ? ಈ ಸ್ಥಳಕ್ಕಾಗಿಯೇ ಈ ನೆಲಕ್ಕಾಗಿಯೇ ಇಂದಿನ ಜಾಗತಿಕ ಯುದ್ಧದಲ್ಲಿ ನೆತ್ತರು ಹರಿಯುತ್ತಿದೆ. ಮನುಷ್ಯನಲ್ಲಿ ಆಕ್ರಮಣ ಶೀಲತೆಯೆಂಬುದೊಂದು ಮಹಾ ವೈರಿ"—ಎಂದು ಸಂಪನ್ನನಾಗಿ ಉಪದೇಶ ಮಾಡಿದುದೂ ನೆನಪಿದೆ. ಒಮ್ಮೆ ಹೀಗಾಯಿತು. ಹುಬ್ಬಳಿಯಿಂದ ನಾನು ಹರಿಹರಕ್ಕೆ ಹೋಗಬೇಕಾಗಿತ್ತು. ಗಾಡಿ ನಿಲ್ದಾಣ ಸೇರುವುದೊಂದೇ ತಡ ಆಕ್ರಮಣ ಶೀಲರು ಅಭಿಯೋಗ ನಡಿಸಿದರು. ನಾನೂ ವಿಶ್ವಪ್ರಯತ್ನ ಮಾಡಿ ಒಳಗೆ ನುಸುಳಿಕೊಂಡೆ. ಕೂಡಲು ಸ್ಥಳವಿದ್ದಿಲ್ಲ. ಒಬ್ಬ ರಸಿಕರು ಕಾಲು ಚಾಚಿ ಒಂದು ಕನ್ನಡ ಪತ್ರಿಕೆಯ ವಿಶೇಷ ಸಂಚಿಕೆಯನ್ನೋದುತ್ತ ತಮ್ಮೊಳಗೆ ತಾವೇ ನಗುತ್ತ ಸಿಗಾರೆಟ್ಟಿನ ಹೊಗೆಯೊಡನೆಯೇ ಆ ನಗೆಯನ್ನು ಹಾರಿಸುತ್ತ

ಕೂತಿದ್ದರು. ಅವರ ಬದಿಯಲ್ಲಿಯೇ ಎಷ್ಟೋ ಹೊತ್ತು ನಿಂತೆ.ಅವರು ಓದು ತ್ತಿರುವುದು ಒಂದು ಏಕಾಂಕ ನಾಟಕವಾಗಿತ್ತು. ನಾನು ಹಾಗೇ ನಿಂತಿದ್ದೆ. ಅವರು ಹಾಗೇ ಓದುತ್ತಿದ್ದರು " ಚೆನ್ನಾಗಿದೆ " ಎಂದು ಓದಿ ಮುಗಿಸಿ ಆಕಳಿ ಸಿದರು. ಆ ನಾಟಕ ಸನ್ನದೇ ಆಗಿತ್ತು. ನಾಟಕಕಾರನಿಗೆ ಅವರ ಪ್ರಶಸ್ತಿ ಯಲ್ಲಿ ಸ್ಥಾನ ಸಿಕ್ಕಲು, ನನಗೆ ಕೂಡಲು ಸ್ಥಾನ ಸಿಗಲಿಲ್ಲ. " ನಾಟಕ ಹೇಗಿದೆ ? " ಎಂದು ಕೇಳಿದೆ. " ಒಳ್ಳೇ ತಮಾಷೆಯಾಗಿ ಬರೆದಿದ್ದಾನೆ " ಎಂದರು. " ಬರೆದವನು ನಾನೇ " ಎಂದೆ. ಅವರು ಅಚ್ಚರಿಯಿಂದ ನನ್ನ ಮುಖ ನೋಡಿದರು. ಪತ್ರಿಕೆ ತೆರೆದರು. ಅದರಲ್ಲಿ ನನ್ನ ಚಿತ್ರವಿರಲಿಲ್ಲ. ಅವ ರಿಗೆ ನಂಬಿಗೆಯಾಗಲಿಲ್ಲ. " ಇವರ ಚಿತ್ರ ಮುಂದಿನ ಸಂಚಿಕೆಯಲ್ಲಿ ಬರು ವುದು " ಎಂದೂ ಸಂಪಾದಕರು ಕಾಣಿಸಿದ್ದರು. ನನ್ನ ಚಿತ್ರ ಅವರಿಗೆ ವೇಳೆಗೆ ಸರಿಯಾಗಿ ಮುಟ್ಟಿರಲಿಲ್ಲವೆಂಬುದೂ ನಿಜ. ಅವರಿಗೆ ನಂಬಿಗೆಯಾಗಿದ್ದರೂ ನನಗೆ ಸ್ಥಳ ಕೊಡುತ್ತಿದ್ದರೋ ಇಲ್ಲವೋ. ಆದರೆ ನಾನು ನಿಂತುಕೊಂಡು ಪ್ರವಾಸ ಮಾಡಿದರೂ ಕಷ್ಟವೆನಿಸಲಿಲ್ಲ ಮನಸ್ಸಿಗೆ. ( ಆದರೂ ಒಮ್ಮೊಮ್ಮೆ ಈ ಬಗೆಯ ಚಮತ್ಕಾರಿಕ ಘಟನೆಗಳಲ್ಲಿ ನಾನು ಇದೇ ಸಾಹಿತಿಯೆಂಬುದನ್ನ ರಿತವರು ರಾಜಮರ್ಯಾದೆಯನ್ನು ಮಾಡಿದುದೂ ಉಂಟು ಮತ್ತೆ! )

ಥರ್ಡಕ್ಲಾಸ್ ಪ್ರಯಾಣದಲ್ಲಿ ಒಮ್ಮೊಮ್ಮೆ ರೋಮಾಂಚಕಾರಿ ಸನ್ನಿ ವೇಶಗಳೂ ನಡೆಯುತ್ತವೆಂಬದು ಸುಳ್ಳಲ್ಲ ಹೆಣ್ಣು ಗಂಡಿನ ಹೆಚ್ಚು ಕಡಿಮೆ ಯಿಲ್ಲದೆ ಒಂದೇ ಮಾನವ ಸರಕುಗಳೆಂಬಂತೆ ಮೂರನೆಯ ಡಬ್ಬೆಯಲ್ಲಿ ಅಡಕಲೇರಿರುವ ಪ್ರಯಾಣಿಕರ ಸಂದಣಿಯಲ್ಲಿ ಸಿಲುಕಿದಾಗ ಉಸಿರಾಡಿ ಸಲೂ ಸ್ಥಳ ಸಿಗದೆ, ತರುಣಿಯರ ತುಂಬಿದ ತೋಳು ಮೈಗೆ ತಾಕಿ ಪುಲಕ ವೆದ್ದಾಗ ಅಷ್ಟೆ ಸಮಾಧಾನಪಟ್ಟುಕೊಳ್ಳುವ ತರುಣ ರಸಿಕರಿಗೂ ಇಲ್ಲಿ ಕೊರತೆ ಇರುವುದಿಲ್ಲ. ನಾನೂ ರಸಿಕನಾಗಿ, ಕವಿಯಾಗಿ ಇಂತಹ ರೋಮಾಂಚಕರ ಸನ್ನಿವೇಶಗಳಿಗೆ ಆಸೆಪಟ್ಟಿದ್ದರೆ ನಾನೂ ಮಾನವನೆಂದೇ ಬಗೆದು ಕ್ಷಮಿಸಿಬಿಡಿ. ಯಾಕೆ? ಎಷ್ಟೊ ಪ್ರೇಮವಿವಾಹಗಳ ಮುನ್ನುಡಿ ಇಲ್ಲಿಯೇ ಮುಗಿದರೆ ತಪ್ಪೇನು ? ಅದು ಸರಿ, ಆದರೆ ಮದುವೆಯಾದವರಿಗೆ ಬಂದ ಇಂತಹ ಅನುಭವ ಮನೆಯಲ್ಲಿಯ ಮಡದಿಗೆ ಗೊತ್ತಾದಾಗ ಪ್ರಸಂಗ ಸ್ವಲ್ಪ ಬಿರುಸಾಗುತ್ತದೆಂಬುದೇನು ಸುಳ್ಳಲ್ಲ.

ನನ್ನ ಮಟ್ಟಿಗಾದರೋ ಮೂರನೆಯ ವರ್ಗವೆಂದರೆ ಒಂದು ಅನ್ನ ಬ್ರಹ್ಮ. "ಆಹಾ ಸುಳ್ಳ ಸುಳ್ಳ ಸಂಸಾರವ್ಯಾರೀಗಿ ! ನಮ್ಮನ್ನೊಳಕೊಂಡು ಒಯ್ಯಾರೋ ಗೋರೀಗಿ" ಎಂದು ತಾಳಗತ್ತಿನಿಂದ ಬೆನ್ನಿಗಡರಿದ ಹೊಟ್ಟೆಯನ್ನು ಹೊಡೆಯುತ್ತ, ಇನ್ನೊಬ್ಬನು ಕಡ್ಡಿಪೆಟ್ಟಿಗೆಯ ಕಾವ್ಯತರಂಗವನ್ನು ನುಡಿಸುತ್ತಿರುವಾಗ, ಸರಾಗವಾಗಿ ಎಳೆಯುವ ಬಿಕ್ಕೆಯುವನ ಹಾಡು ಕರುಳುತಟ್ಟಿ ಕರುಣೆಯನ್ನು ಚಿಮ್ಮಬಹುದು. ಇನ್ನೊಮ್ಮೆ "ಅಬ ತೇರೆ ಶಿವಾ ಕೋನ ಮೇರಾ ಕೃಷ್ಣಕನಯ್ಯಾ" ಎಂದು ಹಾಡುವ ಬಾಲಿಕೆಯ ತರಬೇತು ಹೊಂದಿದ ಸಂಗೀತ ನಮ್ಮನ್ನಚ್ಚರಿಗೊಳಿಸಬಹುದು. ಜಗತ್ತು ದ್ವಂದ್ವಮಯ ವೈವಿಧ್ಯಮಯವೆಂಬದನ್ನು ಒಂದು ಥರ್ಡಕ್ಲಾಸ್ ವರ್ಗದಿಂದಲೇ ಕಂಡುಕೊಳ್ಳಬಹುದು. "ದುನಿಯಾ ಏಕ ತುಫಾನ್ ಮೇಲ" ಎಂದು ಕಾನನಬಾಲೆ ಹೇಳುವುದರಲ್ಲಿ ಅರ್ಥವಿದೆಯಲ್ಲವೆ? ಅದೂ ಅಲ್ಲದೆ "ಗಾಡಿಯ ಸೀಮೆ, ಆಲಂಪಿನ ಸಂತೆ"ಯನ್ನು ರೈಲು ಗಾಡಿಯ ಮೂರನೆಯ ವರ್ಗದಲ್ಲಿ ಅಲ್ಲದೆ ಇನ್ನೆಲ್ಲಿ ಕಾಣಲು ಸಾಧ್ಯ? ಅತ್ತೆಯ ಮನೆಗೆ ಹೋಗುತ್ತಿರುವ ಹಳ್ಳಿಯ ಹುಡುಗೆಯ ಕಂಬನಿ, ದೀವಳಿಗೆಗೆ ಮಾವನ ಮನೆಗೆ ಹೋಗುತ್ತಿರುವ ಅಳಿಯ ದೇವನ ಹಿಗ್ಗು ಎರಡಕ್ಕೂ ಕಲಕದೆ ಗಾಡಿ ಸಾಗುತ್ತದೆ ಯಾರು ತಂತಮ್ಮ ತಾಣಕ್ಕೆ ಇಳಿಯುತ್ತಾರೆ, ಯಾರು ಹತ್ತುತ್ತಾರೆ. ಏನಿದ್ದರೇನು ಎಂದು ಗಾಡಿ ತನ್ನ ಕರ್ತವ್ಯವೊಂದನ್ನೇ ಬಗೆದು ಓಟಕೊಡುತ್ತದೆ— ಹೀಗೆಂದು ವೇದಾಂತಿಯಾಗಿ ವಿಚಾರಿಸುವವನಿಗೂ ಮೂರನೆಯ ವರ್ಗ ಅನ್ನ ಕೊಡುತ್ತಿದೆ.

ಹಗುರಾಗಿ ಪ್ರವಾಸ ಮಾಡುವುದು ನನ್ನ ಹುಟ್ಟುಗುಣವೆಂದು ಹೇಳಿದೆನಲ್ಲವೆ? ಒಮ್ಮೊಮ್ಮೆ ಜಂಕ್ಶನ್ ಸ್ಟೇಶನ್ನುಗಳಲ್ಲಿ ಇನ್ನೊಂದು ಗಾಡಿಗಾಗಿ ದಾರಿಕಾಯುವ ಪ್ರಸಂಗವಿರುತ್ತದೆ. ಚಳಿಗಾಲದ ದಿನವಿದ್ದರಂತೂ ತೀರಿತು. "ಹಿಮಕೆ ಭೇಷಜ" ವನ್ನು ನೆನೆಯುತ್ತ ಅನಾಥನಾಗಿ ಅಂಡಲೆದಿದ್ದೇನೆ. ಈ ಭೇಷಜವನ್ನು ತೆಗೆದುಕೊಂಡೇ ಪ್ರವಾಸ ಮಾಡಬಹುದಾದರೂ ನನಗೇಕೋ ಏಕಾಂಗಿಯಾಗಿ ಪ್ರವಾಸ ಮಾಡುವುದರಲ್ಲಿಯೇ ಹೆಚ್ಚಿನ ಮೋಜು.

ತೀರ ಅರಿಯದ ಪ್ರದೇಶದವಾಗಿರಬೇಕು. ನನ್ನವರೆನ್ನುವವರು ಯಾರೂ ಇರಬಾರದು. ಆಗ ನನ್ನ ಸಂಸ್ಕೃತಿ, ನನ್ನ ಪದವಿ, ನನ್ನ ಸಾಮಾಜಿಕ ಮಾಹಿತಿ

ಮೊದಲಾದವುಗಳನ್ನೆಲ್ಲಾ ಮರೆತು ಬೀದಿಯ ಹುಚ್ಚನಂತೆ ಸುತ್ತಲಿನ ನೆರವಿಯನ್ನು ನಿರೀಕ್ಷಿಸುವುದೆ ನನಗೊಂದು ಕುತೂಹಲ. ಹಾರಿಯ ಬುತ್ತಿಯನ್ನು ಬಿಚ್ಚಿ ಗುಂಪಾಗಿ ನೆರೆದು ಕೈಯಲ್ಲಿ ರೊಟ್ಟಿಯನ್ನು ಹಿಡಿದುಕೊಂಡು ತಮ್ಮ ಹಸಿವನ್ನು ಕಳೆದುಕೊಳ್ಳುವ ದಾರಿಗರನ್ನು ನೋಡಿ ನನ್ನ ಕಣ್ಣಿನ ಹಸಿವನ್ನು ಕಳೆದುಕೊಳ್ಳುತ್ತೇನೆ. ನಾನಂತೂ ನನ್ನೊಡನೆ ಪಾಥೇಯವನ್ನು ಒಯ್ಯುವ ಪರಿಪಾಠವನ್ನಿಟ್ಟಿಲ್ಲ. ರೈಲ್ವೆ ಸ್ಟಾಲಿನಲ್ಲಿಯೇ ಹೇಳಿಸಿದ ಭಜಿ (ಕಹಿಯಾದ) "ಫಿಲ್ಟರ ಚಹ" ಕುಡಿಯುವುದೂ ಒಂದು ಸೊಗಸೇ. ಏಕಾಂಗಿಯಾಗಿ ಹೊರಟಾಗ ಇನ್ನೂ ಏನೇನೋ ವಿಚಿತ್ರ ಮೋಜು ಮಾಡುತ್ತಿರುತ್ತೇನೆ. ನಿಮ್ಮೆಲ್ಲರಿಗೆ ಹೇಳಿದರೆ ನನ್ನ ಹುಚ್ಚುತನಕ್ಕೆ ನಗಬಹುದೆಂಬ ಭೀತಿ ನನಗೆ. ಸಿಗಾರೆಟ್ಟಿನ ಚಟವಿಲ್ಲದ ನಾನು "ಫಿರ್ತಿ"ಯ ಮೇಲೆ ಅದರ ಪ್ರಯೋಗ ಮಾಡಿದ್ದೇನೆ. ಯಾವ ಸಿಗಾರು ಶ್ರೇಷ್ಠ, ಯಾವುದರ ದರ ಎಷ್ಟು ಎಂಬುದು ಗೊತ್ತಿರದೆ, ಅಜ್ಞಾನ ಒಪ್ಪಲಾರದೆ, ಅಂಗಡಿಕಾರನ ಭಾಷೆ ತಿಳಿಯಲಾರದೆ ಚಿಲ್ಲರೆ ಇದ್ದರೂ ರೂಪಾಯಿಯನ್ನೇ ಕೊಟ್ಟು ಕೊಟ್ಟಷ್ಟು ಚಿಲ್ಲರೆ ಕಿಸೆಗೆ ಸೇರಿಸಿದ್ದೇನೆ.

ಮೂರನೆಯ ವರ್ಗದ ಪ್ರವಾಸವೆಂದ ಮೇಲೆ ನಿದ್ದೆಯ ಮಾತನ್ನು ಎತ್ತಲಿಕ್ಕಾದೀತೆ? ಹಾಸಿ—ಹೊಚ್ಚಿದರೂ ನನಗೆ ಪ್ರಯಾಣದಲ್ಲಿ ನಿದ್ದೆ ಬರುವುದಿಲ್ಲ. ಆದರೆ ಕೂತುಕೊಂಡೇ ಒಬ್ಬರ ಮೇಲೊಬ್ಬರು ತಲೆ ಅಪ್ಪಳಿಸುತ್ತ ತೂಕಡಿಸುವವರನ್ನು ಕಂಡು ಸಂಭ್ರಮಪಟ್ಟಿದ್ದೇನೆ. ಒಬ್ಬೊಬ್ಬರ ನಿದ್ದೆಯ ರೀತಿ ಎಂತಹದಿರುತ್ತದೆಂಬುದನ್ನೂ ನೋಡಿಕೊಂಡಿದ್ದೇನೆ. ಗಾಡಿಯ ಸಪ್ಪಳದಲ್ಲಿಯೂ ಗೊರಕೆ ಕೇಳಿಸುವ ಹಾಗೆ ಕೂತು ನಿದ್ರಿಸುವವರಿಗೇನೆನ್ನಬೇಕು?

ನನಗೊಂದೇ ಸಮಾಧಾನ; ಜಗತ್ತು ಹೀಗೆ ನಿದ್ರಿಸುವಾಗ ನಾನು ಕಣ್ದೆರೆದಿರುತ್ತೇನಲ್ಲ—ಎಂದು. "ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿಸಾಹಿತಿಃ" ಎಂದುಕೊಂಡಿದ್ದೇನೆ.

# ಶ್ರಾವಣದ ಕೊಳೆ

ಶ್ರಾವಣದ ಹಸಿರು, ಶ್ರಾವಣದ ವರ್ಷಾವೈಭವ, ಶ್ರಾವಣದ ಕಾಮನ ಬಿಲ್ಲು, ಶ್ರಾವಣದ....ಮುಂತಾದವುಗಳಂತೆ ಶ್ರಾವಣದ ಕೊಳೆಯೂ ಕಾವ್ಯಕ್ಕೆ ಒಳ್ಳೇ ಕಳೆಯನ್ನು ತರಬಲ್ಲದೆಂಬುದು ಬಹುಜನ ಕವಿಗಳಿಗೆ ಹೊಳೆದಂತಿಲ್ಲ.

ಶ್ರಾವಣದ ಜಿಟಿ-ಜಿಟಿ ಮಳೆಯಲ್ಲಿ ಟಾರುಗಳಿಲ್ಲದ ಬೀದಿಗುಂಟ ಸೈಕಲ್ ಸವಾರನಾಗಿ ಎಡಗೈಯಲ್ಲಿ (ಮಳೆಯ ಕೃಪಾ) ಛತ್ತರಿಗೆ, ಬಲಗೈಯಲ್ಲಿ ಒಮ್ಮೊಮ್ಮೆ ಗಂಟೆ, ಒಮ್ಮೊಮ್ಮೆ ಬ್ರೇಕು ಇದ್ದಾಗ ಧಾರವಾಡ ಮಾಳಮಡ್ಡಿಯ ಏರಿಯನ್ನು ಹತ್ತುವ ಪ್ರಸಂಗ ಯಾವುದೇ ಕವಿಗೆ ಬಂದಿದ್ದರೆ ಈ ಒಳಗಾಗಿ ಅವನು ಶ್ರಾವಣದ ಕೊಳೆಯ ಮೇಲೊಂದು ಕಾವ್ಯ ಬರೆದಿರದಿದ್ದರೆ ಅವನು ಕವಿಯೇ ? ಎಂದು ಸಂದೇಹ ತಾಳಬಹುದು. ಮೇಲಿನ ಮಳೆ ಒಮ್ಮೆ ಭೋರ್ಗರೆದು ಮತ್ತೊಂದು ಕ್ಷಣಕ್ಕೆ ನಿಂತು ಹೋಯಿತೆಂದು ಛತ್ತರಿಗೆ ಇಳಿಸಿದಾಗ ಮತ್ತೆ ಜಿಟಿ-ಜಿಟಿ ಪ್ರಾರಂಭವಾಗಲು ಪುನಃ ಛತ್ತರಿಗೆಯನ್ನೇರಿಸಿದಾಗ ಎದುರಿನಿಂದ ಗಾಳಿ ಬಿರ್ರನೆ ಬೀಸಿ ಕೃಪಾಛತ್ರವು ಮಣಿದು ಡೊಂಬರಾಟ ಮಾಡಿ ಬೆನ್ನ ಕಡೆಗೆ ಹೊಟ್ಟೆಮಾಡಿ ನಿಂತಾಗ ಸೈಕಲ್ ಸವಾರನ ಫಜೀತಿಯ ಕಲ್ಪನೆ ಸ್ವಲ್ಪ ತಂದುಕೊಳ್ಳಬಹುದಲ್ಲವೆ ? ಇಷ್ಟಕ್ಕೇ ಮುಗಿಯಲಿಲ್ಲ ಈ ಸಡಗರ. ಕಾಲೊಳಗಿನ ಚಪ್ಪಲಿ ನೆನೆದು ಪಟ್ಟಿ ಹರಿದು ಬಿಚ್ಚಿ-ಬಿಚ್ಚಿ ಬೀಳುತ್ತಿರುವಾಗ, ಬೀದಿಯ ಕೆಸರೆಲ್ಲಾ ಕಾಲಗುಂಟ ಕೊಸರಿ ಬರುತ್ತಿರುವಾಗ, ಹಠಾತ್ತಾಗಿ ಕಾಲೊಳಗಿನ ಧೋತರ ಚುಂಗು ಚೇನಿನಲ್ಲಿ ಸಿಕ್ಕುಬಿಟ್ಟು ರಥವು ಕೆಸರಿನಲ್ಲಿ ಕಮಲದಂತೆ ಸಿಗಿಬಿದ್ದಾಗ, ರಣರಂಗದಲ್ಲಿ ರಥದ ಚಕ್ರವು ಭೂಮಿಯಲ್ಲಿ ಸಿಲುಕಿದ ಕರ್ಣನಿಗಿಂತಲೂ ಮಿಗಿಲಾದ ಕನಿಕರದ ಅವಸ್ಥೆಯನ್ನು ಈ ಸೈಕಲ್ ಮಹಾರಥಿಯು ತೋರುತ್ತಿರುವ ಅವಸ್ಥೆ ಯಾವ ಕವಿಯ ಅಂತರಂಗವನ್ನು ಕಾವ್ಯ ರಚನೆಗೆ ಸ್ಫೂರ್ತಿಸದು ?

ಶ್ರಾವಣವು ಪ್ರಕೃತಿದೇವಿಯ ಹಬ್ಬದ ಕಾಲ. ಬನಸಿರಿಯ ಹಸಿರ ಸೊಗಸು. ಕೇದಗೆ, ಶಾವಂತಿಗೆ, ಸಂಪಿಗೆ ಸುರಿಗೆಗಳ ಸಂಭ್ರಮದ ಕಾಲ ವಿದು. ಮನೆ-ಮನೆಗಳಲ್ಲಿಯೂ ಇದು ಹಬ್ಬದ ಸಾಲು. ಹೊಳೆಯಲ್ಲಿ ಜಿಲ್ಲ ಬೀಳುತ್ತಿರುವ ಈ ಸುಗ್ಗಿಯ ಕಾಲದಲ್ಲಿ ಕವಿವಾಣಿ ಸ್ಫೂರ್ತಿಯಿಂದ ಭೂಮಿ ಯಿಂದ ವ್ಯೋಮಕ್ಕೆ ನೆಗೆಯುವುದೇನೂ ಆಶ್ಚರ್ಯವಲ್ಲ. ಆದರೆ ಕವಿಯ ಕಣ್ಣು ಬೆಳೆಯ ಬಿಸಿರಿಯನ್ನಷ್ಟೇ ನೋಡಿದರಾಗದು. ಕೊಳೆಯ ವೈಸಿರಿ ಯನ್ನೂ ನೋಡಬೇಕು. ನೋಡಿ ಕಾವ್ಯದ ಕಿಡಿ ಕಾರಬೇಕು. ಶ್ರಾವಣ ಮಾಸದಲ್ಲೇ ಬರುವ ಸ್ವಾತಂತ್ರ್ಯ ದಿನಾಚರಣೆಯ ರಾಷ್ಟ್ರಧ್ವಜದ ತ್ರಿವರ್ಣ ಗಳನ್ನು ಈ ಬಗೆಯ ವಿವಿಧ ವರ್ಣಗಳ ಪುಷ್ಪರಾಜಿಯಲ್ಲಿ ಹಂಚಿದೆಯೆಂಬ ಆಧುನಿಕ ಉತ್ಪ್ರೇಕ್ಷೆಯನ್ನು ಮಾಡಿದ ಕವಿಗಳೂ ಇರಬಹುದು.

ಮಳೆಯು ಕೊಳೆ ಬೆಳೆಗಳಿಗೆ ಒಳ್ಳೇ ಗೊಬ್ಬರವೆಂದು ಹೇಳುತ್ತಾರೆ. ಆದರೆ ಕಾವ್ಯದ ಬೆಳೆಗೂ ಅದು ಒಳ್ಳೇ ಗೊಬ್ಬರವೆಂದು ಬಹು ಜನರಿಗೆ ಗೊತ್ತಿದ್ದಂತೆ ಕಾಣುವುದಿಲ್ಲ. ಮಳೆಗಾಲ, ಕಾರ್ಮುಗಿಲು, ವರ್ಷಾಕಾಲ, ಕಾರ್ಗಾಲಗಳನ್ನು ಕುರಿತ ಪ್ರಾಚೀನ ಕಾವ್ಯಗಳನೇಕವಾಗಿರಬಹುದು. ವರ್ಷಾ ಕಾಲಕ್ಕೆ ಮುನ್ನುಡಿಯಾದ ಆಷಾಢ ಪ್ರಥಮ ದಿವಸದ ಮೇಘವು ಕವಿ ಕಾಲಿದಾಸನ ಅಮರ ಸಂದೇಶದ ದೌತ್ಯವನ್ನು ವಹಿಸಿದ್ದುದರಿಂದ ಅದೂ ಅಮರವಾಯಿತು. ಆದರೆ ಪಾಪ, ಮಳೆಯಿಂದ ಕೊಚ್ಚಿಕೊಂಡು ಎದ್ದ ಈ ಕೊಳೆ ಮಾತ್ರ ನಮ್ಮ ಪ್ರಾಚೀನ ಕವಿಗಳನ್ನು ಸ್ಫೂರ್ತಿಸಿದಂತಿಲ್ಲ. ಈ ಕೊಳೆಯಿಂದ ಕಾವ್ಯದ ಕಳೆ ಹೇಗೆ, ನೀವೀಗ ಇಲ್ಲಿ ಕೇಳಿರಿ.

ನಮ್ಮ ನಗರದ ರಾಜಬೀದಿಗಳೀಗ ಟಾರ ರೋಡುಗಳಿರುವುದರಿಂದ ಪ್ರಾಚೀನ ಪುಷ್ಕಳ ಕೊಳೆಗೀಗ ಸ್ಥಾನವಿಲ್ಲದಾಗಿದೆ. ಆದರೂ ಆ ಗತವೈಭವ ವನ್ನು ಕಾಣಲು ಇನ್ನೂ ಸಾಧ್ಯವಿದೆ, ಕೆಲಕೆಲವು ಸ್ಥಳಗಳಲ್ಲಿ.

ಒಮ್ಮೆ ಇಂಥದೇ ಒಂದು ಸ್ಥಳದಿಂದ ಬೀದಿಯ ಒಂದು ಓರೆಹಿಡಿದು ಹೊರಟಿದ್ದೆ. ಯಾವಾಗಲೂ ನಾನು ಈ ನಡುಬೀದಿಯ ಜಂಜಾಟಬೇಡ ವೆಂದು ಅನಾಸಕ್ತ ಯೋಗಿಯಂತೆ ಗಟಾರದ ಓರೆಯನ್ನು ಹಿಡಿದೇ ಹೋಗುವೆ. ಹೀಗೆ ಹೋಗುತ್ತಿರುವ ಸಮಯದಲ್ಲಿ ಅದೇ ಕೆಲ ಹೊತ್ತಿನ ಹಿಂದೆ ಮಳೆ ಹೊಡೆದು ಹೋಗಿತ್ತು. ಮಳೆಯ ವೇಗ ಕಡಿಮೆಯಾದರೂ ಅದರ ತುಷಾರಸಿಂಚನವಿನ್ನೂ ನಡೆದೇ ಇತ್ತು. ಬೀದಿಯ ನಡು ನಡುವೆ ಕೆಂಪು

ವರ್ಣದ ಪಂಕವು ಮಡುವುಗಟ್ಟಿ, ಅಲ್ಲಿ ಹಾದಾಡುತ್ತಿರುವವರ ಪಾದಗಳನ್ನೆಲ್ಲಾ ಪಂಕೇರುಹಗಳನ್ನಾಗಿ ಮಾಡುತ್ತಿತ್ತು. ನಾನೂ ಇದೇ ಹಾದಿಯಿಂದಲೇ ಹೋಗುತ್ತಿದ್ದೆನೆಂದು ಹೇಳಿದೆನಲ್ಲವೆ ? ನಾನು ಬರಿಗಾಲಿನಿಂದ ಹೋಗುತ್ತಿದ್ದೆ. ಮೊಚ್ಚೆ, ಚಪ್ಪಲಿಗಳನ್ನು ಹಾಕಿಕೊಂಡು, ಇನ್ನೊಬ್ಬರ ಮಾತಿರಲಿ, ನನ್ನ ಬಟ್ಟೆಗಳಿಗೆ ನಾನೇ ಪಂಕಸಿಂಚನ ಮಾಡಿಕೊಳ್ಳಬಾರದೆಂಬುದೇ ಉದ್ದೇಶ. ಬರೆಗಾಲಿನಿಂದ ಭರದಿಂದ ಸಾಗುತ್ತಿರುವಾಗ ಐದೂ ಬೆರಳುಗಳ ಸಂದುಗಳಿಂದ ಹಿಸುಕಿ ಹೊರಹೊಮ್ಮುತ್ತಿರುವ ಪಂಕಶರಧಿಯನ್ನೀಸುವ ಮಾರುತಿಯು ಅಪರಾವತಾರವಾಗಿ ಸಾಗಿದ್ದೆ. ಪಾದಗಳನ್ನು ಪಂಕದ ಹಾಸಿಗೆಯ ಮೇಲೆ ಸ್ವಲ್ಪ ಬಿರುಸಾಗಿ ಇಟ್ಟರೆ ಅದರಿಂದಲೆ “ಕನ್ಹಯ್ಯಾ ಮಾರೋ ಪಿಚಕಾರಿ ” ಎಂಬ ಗೀತವು ನೆನಪಾಗಬಾರದೆಂದು ಮೊದಲಗಿತ್ತಿಗೂ ಮಿಗಿಲಾಗಿ ಸೂಕ್ಷ್ಮವಾಗಿ ಮೆಲ್ಲಡಿಗಳನ್ನಿಡುತ್ತಾ ನಡೆದಿದ್ದೆ. ನನ್ನ ಅದೃಷ್ಟ ಅದಕ್ಕೇನು ಮಾಡಬೇಕು? ರಭಸದಿಂದ ಹಿಂದಿನಿಂದ ಬಂತು ಒಂದು ಟ್ರಕ್ಕು. ಆಗಿನ ಹಾಹಾಕಾರವನ್ನು ನೆನೆದರೆ ಇನ್ನೂ ನಾನು ಹೌಹಾರಿ ಹೋಗುತ್ತೇನೆ. ಗಂಗಾನದಿಯ ಬೆಳ್ನೊರೆಯಂತೆ ಶೋಭಿಸುತ್ತಿರುವ ನನ್ನ ಧೋತರದ ಗತಿಯೇನಾಗಿರಬೇಕು ? ಮನೆಗೆ ಹೋದಾಗ ನಮ್ಮವರು ಖೊಳ್ಳನೆ ನಕ್ಕು ಕೇಳಿದರು. “ ನನಗೆ ಪ್ರಿಂಟಿನ ಪತ್ತಲ ಬೇಡವೆಂದವರು, ನೀವೀಗ ಪ್ರಿಂಟಿನ ಧೋತರ ಉಟ್ಟುಕೊಂಡು ಬಂದಿದ್ದರಲ್ಲ? ಇದೊಳ್ಳೇ ಫ್ಯಾಶನ್ನು !” ಎಂದು.

‘ನಮ್ಮೂರಿನ ಮಳೆಯು ಕೊಳೆಯು ಸತಗರ ಇದು ’ ಎಂದು ನನ್ನವರ ಮುಂದೆ ತಮಾಷೆಯೇನೊ ಮಾಡಿದರೂ ಪೌರನೀತಿಯ ಪ್ರಥಮ ತತ್ವಗಳನ್ನು ಕೂಡ ಅರಿಯದೆ ಬೀದಿಯ ರಾಡಿಯನ್ನು ಇನ್ನೊಬ್ಬರ ಬಟ್ಟೆಗಳ ಮೇಲೆರಚುವ ಈ ‘ರಾಡಿಕಲ್’ ಡ್ರೈವರುಗಳ ಮೇಲೆ ಬ್ರಹ್ಮಾಂಡ ಸಿಟ್ಟು ತಾಳಿದೆ. ನನ್ನವರ ಮುಂದೆ ಇದೆಲ್ಲಾ ಇಲ್ಲದ ರಾಡಿ ಯಾಕೆ ಎಂದು ಸುಮ್ಮನಾಗಿಬಿಟ್ಟೆ.

ಬೀದಿಯ ಮೇಲೆ ಪುಕ್ಕಟೆಯಾಗಿ ರಾಡಿ ಬಿದ್ದಿರುತ್ತದೆಂದು ಇನ್ನೊಬ್ಬರ ಮೇಲೆ ಅದರ ದುರುಪಯೋಗ ಮಾಡುವವರಿಗೇನೆನ್ನಬೇಕು? ‘ ತನ್ನಂತೆ ಪರರು ’ ಎಂದು ಕಾರಿನೊಳಗೆ ಬೆಚ್ಚನೆ ಕೂತುಕೊಂಡ ಜನರು ಏಕೆ ಬಗೆ

ಡಾರು ? ಕೈಯಲ್ಲಿರುವ ಕೊಡೆಯನ್ನು ಢಾಲಿನಂತೆ ಹಿಡಿದು ಕಾದಾಡುವ ಯೋಧನಂತೆ ನಿಂತರೂ ಈ ಬ್ರಿಕ್ಸ್ಟ್ರಗಳು, ಕಾರುಗಳು, ಟಾಂಗಾಗಳು ಇಕ್ಕೆಲಗಳಿಗೂ ಚಿಲ್ ಎಂದು ರಾಡಿ ಸಿಡಿಸುತ್ತ ರಭಸದಿಂದ ಓಡಾಡುತ್ತಿರುವಾಗ ಅವುಗಳ ಏಟಿಗೆ ಸಿಕ್ಕವನೆ ಪಾಪಿ ಎಂದುಕೊಂಡು ಸುಮ್ಮನಿರಬೇಕಷ್ಟೆ.

ಈ ಮಳೆಯ ವೈಭವ ಇಷ್ಟಕ್ಕೆ ಮುಗಿಯಲಿಲ್ಲ. ಅದರೊಳಗೂ ನಮ್ಮೂರಿನ ಮಳೆಯ ವೈಭವ ಹೇಳತೀರದು. ಅದರದೊಂದು ವೈಶಿಷ್ಟ್ಯವೇ ಬೇರೆ. ಏನೋ ಅಬ್ಬರಿಸಿಕೊಂಡು ಬಂತು, ಕೊಚ್ಚಿಕೊಂಡು ಹೋಯಿತು. ವಾತಾವರಣ ಮತ್ತೆ ತಿಳಿಯಾಯಿತು ಎಂದಿಲ್ಲ. ಯಾವಾಗಲೂ ಠಿಸಿ ಠಿಸಿ, ಸಿಡಿಮಿಡಿ ಮಾಡುವ ಸಣ್ಣ ಮಕ್ಕಳಂತೆ ರಿಪಿರಿಪಿ ಹತ್ತಿಯೇ ಇರುತ್ತದೆ. ಮುಗಿಲಿನಂತೆ ಮನಸ್ಸೂ ಮೋಡಗವಿದು ಪ್ರಸನ್ನತೆಗಳೆಂಬುದೆ ಮಾಯವಾಗಿ ಹೋಗುತ್ತದೆ. ಈ ಕ್ಷಣಕ್ಕೆ ಮಳೆ ನಿಂತಿತೆಂದು ಕೊಡೆ ಇಳಿಸಿ ಹತ್ತು ಹೆಜ್ಜೆ ಮುಂದೆ ಸಾಗುವುದರೊಳಗೇ ಮತ್ತೆ ಸುರುವೆ ಜಿಟಿ ಜಿಟಿ, ರಿಟಿ ರಿಟಿ. ಕೊಡೆ ಬಿಟ್ಟು ನೀವು ಹೊರಗೆ ಹೋದಾಗಲಂತೂ ಮಳೆ ಖಂಡಿತ. ಅಂತೆಯೇ ನಮ್ಮೂರ ಮಳೆ ಹಟವಾರಿ ಮಗುವಿನಂತೆ.

ಇದರ ಲೀಲೆಯನ್ನು ಇಷ್ಟೆಂದು ವರ್ಣಿಸಿ ತೀರದು. ಒಮ್ಮೆ ನಾನು ನನ್ನ ಮಿತ್ರನಿಗೊಂದು ಅರ್ಜಂಟ ಲೆಟರ ಪೋಸ್ಟ ಮಾಡುವುದಿತ್ತು. ಟಪಾಲು ಕಟ್ಟುವ ವೇಳೆ ಸಮೀಪಿಸಿತ್ತು. ಹೊರಗೆ ಜಿಟಿ ಜಿಟಿ ಮಳೆ ಹತ್ತಿತ್ತು. ಅಂಥದರಲ್ಲಿ ಗಡಬಡಿಸಿಕೊಂಡು ಹೊರಬಿದ್ದೆ. ಪತ್ರ ಪೋಸ್ಟ ಮಾಡಿ ಬಂದು ನೋಡುತ್ತೇನೆ, ಪತ್ರದ ವಿಳಾಸವೆಲ್ಲಾ ನನ್ನ ಅಂಗೈ ಮೇಲೇ ಮೂಡಿಬಿಟ್ಟಿದೆ! ಒಬ್ಬ ಹರಟೆಗಾರರು ಒಂದೆಡೆಗೆ ಬರೆದುದು ನೆನಪಾಯಿತು. ಮಳೆಗಾಲದ ಪೋಸ್ಟಮನ್ನನು ಓಲೆಗಳ ಮೇಲಿನ ವಿಳಾಸಗಳನ್ನೆಲ್ಲಾ ಕೈಗೇ ಅಂಟಿಸಿಕೊಂಡು ಕೊಡೆಯೆಂಬನಾತ ಪತ್ರವನು—ಅವನು ಪತ್ರಗಳನ್ನು ಕೊಡಲು ಒಲ್ಲೆನ್ನುವನಂತೆ.

ಮಳೆಗಾಲ ಬಂದಿತೆಂದರೆ ನಮ್ಮ ಗವಳಿಗಿತ್ತಿ ಗಂಗವ್ವನ ಖುಷಿ ಹೇಳತೀರದು. ಒಳ್ಳೇ ಹೈನಕ್ಕೆ ಒಳ್ಳೇ ಹಸಿರು ಬೆಳೆದೀತು ಎಂದಲ್ಲ. ಹಾಲಿನಲ್ಲಿ ನೀರು ಬೆರಸಿದ ಪಾಪಕ್ಕೆ, ಪಾಪದಕಿಂತ ಅಪರಾಧಕ್ಕೆ ಎನ್ನಿರಿ ಬೇಕಾದರೆ, ಗುರಿಯಾಗದೆ ಪಕೃತಿ ತನ್ನಕಾಯಕವನ್ನು ಈಡೇರಿಸಿತಲ್ಲಾ ಎಂದು. 'ಏನವ್ವಾ

ಗಂಗವ್ವಾ ಹಾಲು ಘಲೋ ಕೊಡತೀ ಇಲ್ಲೋ ? ' ಎಂದು ಕೇಳಿದಾಗ 'ಯಪ್ಪಾ ಮಳೀ ಒಂದೀಟ ಕಡಿಮೆ ಆಗ್ಲಿ ತಡೀರಿ, ' ಎನ್ನುತ್ತಾಳೆ, ವರುಣ ದೇವರು ಸುರಿಸುವ ಮಳೆಯನ್ನೆಲ್ಲಾ ಇವಳ ಹಾಲಿನ ಪಾತ್ರೆಯಲ್ಲೇ ಸುರಿ ಸುವ ಹಾಗೆ. ಮಳೆಗಾಲ ಮುಗಿಯಿತೊ, ಸರಿ, ದನಕ್ಕೆ ಮೇವೇ ಇಲ್ಲಾ, ಹಾಲು ಹೇಗೆ ಗಟ್ಟಿಯಾಗಬೇಕು ? ಎಂದು ಸುರುವು. ಸರಿ, ನಾನೂ ಅವಳ ರಗಳೆಗೆ ಬೇಸರಿಯದೆ "ಗಂಗವ್ವಾ, ನಮ್ಮೂರಲ್ಲಿ ಹಾಲ್ಗಿರೇನೆ ಆದೆಯಲ್ಲಾ ಅಲ್ಲೀವೆ ಹಾಲು ತಂದು ಕೊಟ್ಟುಬಿಡು" ಎಂದಾಗ 'ಅಲ್ಲಿ ಹಾಲು ತರಲಾಕ ನಂವ್ಯಾಕ ಮಧ್ಯಸ್ಥಿಕೆ ಬೇಕು. ಅದು ಸಾರ್ವಜನಿಕ ಕೆರೀ ಐತಿ ' ಎಂದು ಅಷ್ಟೇ ಚುರುಕಾಗಿ ಉತ್ತರಿಸುವಳಾಕೆ.

ಮಳೆಗಾಲದಲ್ಲಿ ನಮ್ಮ ಮನೆಯ ವೈಭವ ಹೇಳತೀರದು. ಎಷ್ಟು ಸಲ ಹಂಚು ಹೊಚ್ಚಿದರೂ ಮತ್ತೆ ಹತ್ತಾರು ಕಡೆ 'ಪಂಜೇರು' ಆಗಿರುತ್ತದೆ. ಒಮ್ಮೆ ಒಂದು ಸ್ವಾತಿಯ ಮಳೆಗಂತೂ ಮನೆಯೊಳಗೇ ಮಹಾಪೂರ ಬಂದು ಟೇಬಲ್ ಬುಡಕ್ಕೆ, ಮಂಚದ ಮೇಲೆ ಮಣೆ ಹಾಕಿ ಅದರ ಬುಡಕ್ಕೆ ಮಲ ಗಿದ ನೆನಪು ನನಗಿದೆ. ಮಳೆ ಅಷ್ಟು ಜೋರು ಇಲ್ಲದಾಗ ಮಾಳಿಗೆಯ ಸಂದು ಗಳ ಅಡಿಯಲ್ಲಿ ಸಾಲಾಗಿಟ್ಟ ತಪ್ಪೇಲಿ, ಪಾತೇಲಿ, ಡಬರಿ, ಬಕೆಟ್ಟುಗಳು ಟಪ ಟಪ ತಾಳೆಯ ಸಪ್ಪಳ ನಡೆಸಿದಾಗ ಹಾಯಾಗಿ ನಿದ್ರೆ ಮಾಡಬಹುದು!

' ಮಳೆಗಾಲದಲ್ಲಿ ನಮ್ಮ ಮನೆಯ ನೀರೊಲೆಯನ್ನು ಹೊತ್ತಿಸಿಕೊಟ್ಟ ವರಿಗೆ ನಮ್ಮ ಮಗಳನ್ನು ಕೊಟ್ಟು ಮದುವೆ ಮಾಡುತ್ತೇವೆ' ಎಂಬುದೊಂದು ಸ್ವಯಂವರವನ್ನಿಡಬೇಕೆಂದಿದ್ದೇನೆ ಎಂದು ನಮ್ಮ ಹಿರಿಯರು ಆಗಾಗ ಹೇಳುತ್ತಿದ್ದುದು ವ್ಯರ್ಥವಾಗಿರಲಿಲ್ಲ. ಮಳೆಗಾಲದ ಹಸಿ ಕೆಚ್ಚು ಕಟ್ಟಿಗೆಗಳು. ಅಗ್ನಿಯೇ ತಣ್ಣಗಾದ ಈ ಮಳೆಗಾಲದಲ್ಲಿ ತಂಪಾದ ಕಟ್ಟಿಗೆಗಳನ್ನು ಹೊತ್ತಿ ಸುವುದು ಹೇಗೆ ? ಯಜ್ಞಯಾಗಗಳಲ್ಲಿ ಸಮಿತ್ತುಗಳನ್ನು ತಿಕ್ಕಿ ಅಗ್ನಿ ಹೊತ್ತಿಸುತ್ತಿದ್ದರಂತೆ. ಅವರಿಗೆ ನಮ್ಮ ಮನೆಯ ಕಟ್ಟಿಗೆಗಳಂತಹ ಸಮಿತ್ತು ಗಳು ಸಿಕ್ಕಿದ್ದರೆ ಹೇಳುತ್ತಿದ್ದೆ. ಕಟ್ಟಿಗೆಗಳ ಗತಿ ಹೀಗಿರುವಾಗ ಮತ್ತೆ ನೀರೊ ಲೆಯ ಬೆಳಕಿಂಡಿಯಿಂದ ಸಣ್ಣದೊಂದು ರಾಕೆಟ್ ಫಾಲ್ಸ ಧಾರೆಗಟ್ಟಿ ಇಳಿ ಯುತ್ತಲೆ ಇರುತ್ತದೆ. ಇಂಥದರಲ್ಲಿ ನೀರೊಲೆ ಹೊತ್ತಿಸಿಕೊಳ್ಳಬೇಕು. ಇಂಥದೆ ಒಂದು ಮಳೆಗಾಲದಲ್ಲಿ ನಮ್ಮವಳಿಗೆ ಒಂದು ಜೋಡಿ ಖಾದಿ ಸೀರೆಗಳನ್ನು

ತಂದುಕೊಟ್ಟಿದ್ದೆ ನಾನು. ಸೀರೆಯನ್ನು ಒಗೆದ ಮೇಲೆ ಮನೆಯ ಎಲ್ಲಾ ಕೋಲುಗಳ ಮೇಲೆ ಪಸರಿಸಿ ಛತ್ರಿನಂತೆ ಒಣ ಹಾಕುತ್ತಿದ್ದಳಾಕೆ. ಎಂಟು ದಿನಗಳ ಸುಮಾರಿಗೆ ಸ್ವಲ್ಪ ಸೀರೆ ಆರಿದಾಗ ಒಂದು ಮಳೆ ಹೊಡೆಯಬೇಕು. ಮತ್ತೆ ಈ ಹಿಮ ಶುಭ್ರ ಸೀರೆ ಮಾಳಿಗೆಯ ಮೇಲೆ ಕಂಗೊಳಿಸುತ್ತಿರಬೇಕು. ಆದೇ ಸಮಯಕ್ಕೆ ನಾನು ಮಲ್ಲಿನ ಎರಡು ಧೋತರ ತಂದಿದ್ದಾಗ ಅವಳು ಅವೆರಡೂ ಜೋಡಿಸಿ ಅಚ್ಚು ಹಾಕಿಸಿ ತನಗೆ ಪ್ರಿಂಟಿನ ಪತ್ತಲ ಮಾಡಿ ಕೊಂಡು ಬಿಟ್ಟಿದ್ದಳು.

ಮಳೆಗಾಲದಲ್ಲಿಯ ನಮ್ಮೂರ ಕಾಯಿಪಲ್ಲೆಯ ಪೇಟೆಯನ್ನು ವರ್ಣಿಸ ದಿದ್ದರೆ ಈ ವೈಭವಪೂರ್ಣ ವಿಮರ್ಶೆ ಮುಗಿಯದು. ಮಳೆಗಾಲದಲ್ಲಿ ಹಸಿರು ಹೆಚ್ಚಾಗಿ ಬೆಳೆಯುತ್ತದೆ. ಅಂತೆಯೇ ತೆರಪಿಲ್ಲದೆ ಹಸಿರು ತೊಪ್ಪಲಪಲ್ಲೆ. ಹಸಿರು ಪಲ್ಲೆ ಆರೋಗ್ಯಕ್ಕೆ ಒಳ್ಳೇದು ಎಂದು ಕೇಳಿದ್ದ ನಾನು ಬರಿ ಹರ ವಿಯ ಪಲ್ಯವನ್ನೇ ತರುತ್ತಿದ್ದೆ. ಆದರೆ ಚೀಲದಲ್ಲಿ ಹಿಡಿಸದೆ ಕೈಯೊಳಗೆ ರಾಶಿಗಳನ್ನೇ ಹೊತ್ತುಕೊಂಡು ತರುವಾಗ ಬೀದಿಯ ದನ-ಕರುಗಳೆಲ್ಲಾ ನನ್ನನ್ನೇ ಮೆಚ್ಚಿಕೊಂಡು ಬೆನ್ನಟ್ಟುತ್ತಿರಲು ಕೊನೆಗೊಮ್ಮೆ ಹಸಿರು ಕಾಯಿ ಪಲ್ಲೆ ಬಿಟ್ಟು ಕೊಡಬೇಕಾಯಿತು. "ಯಾಕ್ರೀ, ಹಸಿರು ಪಲ್ಯೆ ಬಿಟ್ರ್ಯಾ ?" ಎಂದು ನನ್ನ ಮಿತ್ರರು ಕೇಳಿದಾಗ "ಛೆ ಛೆ. ಈ ಕಾಲದಾ ದಿನಗಳಲ್ಲಿ ಎಲ್ಯಾ ದರೂ ತಿನ್ನುವುದುಂಟೆ? ಕ್ರಿಮಿಗಳು ಹಸಿರು ಪಲ್ಲೆಯಲ್ಲಿ ಮನೆ ಮಾಡಿರು ತ್ತವೆ." ಎಂದು ಉತ್ತರಿಸಿದೆ. ಮಳೆಗಾಲದಲ್ಲಿ ಸಂಜೆಯ ಮುಂದೆ ನಮ್ಮ ಪಲ್ಲೆಯ ಪೇಟೆಗೆ ಹೋದರೆ ರಜ್ಜು-ರಾಡಿಗಳೆಲ್ಲಾ ಸೂಸಿ ಹರಿದು ಬಂದು ಇಲ್ಲಿ ಮನೆ ಮಾಡಿಬಿಟ್ಟಿರುತ್ತವೆ. ಯಾವುದೇ ಕಾಯಿಪಲ್ಲೆ ಕೊಂಡರೂ ಮೈಯೆಲ್ಲಾ, ಬಟ್ಟೆಯಲ್ಲಾ ರಾಡಿ. ಮನೆಗೆ ತಂದ ಮೇಲೂ ಬಚ್ಚಲಿನಲ್ಲಿ ಅವಕ್ಕೆ ಅಭ್ಯಂಜನ ಮಾಡಿಸದೆ ಕೊಳೆ ಹೋಗುವಂತೆಯೇ ಇಲ್ಲ. ಮಾರ್ಕೆಟ್ಟ ಗಳಲ್ಲಿ ಕಾಯಿಪಲ್ಲೆ ಸಾಲದ್ದಕ್ಕೆ ಕೊಳೆತ ಮಾವಿನ ಹಣ್ಣುಗಳನ್ನೂ ತುಳಿಸಿ ಬಿಟ್ಟು ಅದರ ಸೀಕರಣೆಯೆಲ್ಲಾ ಮಾರ್ಕೆಟ್ಟಿನ ತುಂಬಾ ಹೊನಲಾಗಿ ಹರಿ ಯುತ್ತಿರುತ್ತದೆ.

ಮಳೆಗಾಲದಲ್ಲಿ ಕೊಳೆಯಿಲ್ಲದ ಎಡೆಯಿಲ್ಲ. ಅದರಲ್ಲೂ ನಮ್ಮೂರ ಮಳೆಗಾಲದ ನಮ್ಮೂರ ಕೊಳೆಯೆಂದರೆ, ಹೇಳಿದೆನಲ್ಲ ಕಾವ್ಯಕ್ಕೆ ಆಗರ

ಎಂದು. ಮನೆ, ಬೀದಿ, ಕೆರೆ, ಕಟ್ಟೆ, ಮಾರ್ಕೆಟ್ಟು, ಕಚೇರಿ, ತಿಪ್ಪೆ, ಉಪ್ಪರಿಗೆ ಎಲ್ಲಾ ಕಡೆಗೂ ಕೋಳಿಯ ರಾಜ್ಯ. ಈ ಕೋಳಿ ರಾಜನ ಅಧಿಕಾರ ಮುದ್ರೆ ಯನ್ನು ಎಲ್ಲರ ಬಟ್ಟೆಗಳ ಮೇಲೆ, ಹರಕು ಚಪ್ಪಲಿಗಳ ಮೇಲೆ, ಛತ್ರಿಯ ಮೇಲೆ, ಮನೆಗಳ ಮ್ಯಾಚ್ಯಗಳ ಮೇಲೆ, ಮ್ಯಾಚ್ಯಗಳಿಲ್ಲದ ಮನೆಗಳ ಹಾಸುಗೆಗಳ ಮೇಲೆ, ಹೊರಪಿನ ಹೊತ್ತು ಸಾಧಿಸಿ ಒಣ ಹಾಕುತ್ತಿರುವ ಆಗಸನ ಬಟ್ಟೆಗಳ ಮೇಲೆ, ತಿರುಗಾಡುವ ಯುವಕರ ಪಾಯಿಜಾಮದ ಅಂಚಿ ನಲ್ಲಿ, ಸ್ವಚ್ಛಂದವಾಗಿ ಕಾಣಬಹುದು.

# ಮೋಡಕಾಬಾಜಾರ

ನನಗೆ ಪುಸ್ತಕ ಓದುವುದಕ್ಕಿಂತ ಪುಸ್ತಕ ಸಂಪಾದಿಸುವಲ್ಲಿಯೇ ಹೆಚ್ಚಿನ ಆಸ್ಥೆ. ಇದಕ್ಕೊಂದು ಮಹತ್ತರವಾದ ಕಾರಣವುಂಟು. ನನ್ನ ಮನೆಯ ಪುಸ್ತಕಾಲಯದ ಮುಕ್ಕಾಲು ಭಾಗ ಸಂಗ್ರಹವಾದುದು ಮೋಡಕಾಬಾಜಾರಿನಿಂದಲೆ. ಕಿರಿಯ ಕಾಸಿನಲ್ಲಿ ಹಿರಿಯ ಕೃತಿಗಳು ದೊರೆಯಹತ್ತಿದುದರಿಂದಲೆ, ಪುಸ್ತಕ ಪರಿಚಯ ಮಾಡಿಕೊಳ್ಳುವುದಕ್ಕಿಂತ ಪುಸ್ತಕ 'ಪರಿಚೇಜ್' ಮಾಡುವಲ್ಲಿಯೆ ನನ್ನ ಆಸಕ್ತಿ ವಿಶೇಷ ಬೆಳೆಯುತ್ತ ಬಂತು. ನನ್ನ ಸುದೈವವೊ ಸಾಹಿತಿಗಳ ದುರ್ದೈವವೊ, ಅಂತೂ ಮೋಡಕಾಬಾಜಾರಿನಲ್ಲಿ ಮಹಾಕವಿಗಳ ಬೆಲೆ ಇಳಿದುದು ಶೋಚನೀಯ ಸಂಗತಿಯೆಂಬುದು ಸುಳ್ಳಲ್ಲ.

ಮಾರ್ಕೆಟ್ಟಿನಲ್ಲಿ ಹಾಯ್ದು ಬರುವಾಗೊಮ್ಮೆ ಮೋಡಕಾಬಾಜಾರಿನ ಮುಂದೆ ಕೆಲವೇಳೆ ನಿಂತು ಗ್ರಂಥಪರೀಕ್ಷಣ ಮಾಡಿಯೆ ಮುಂದೆ ಸಾಗುವುದೊಂದು ಚಟವಾಗಿ ಬಿಟ್ಟಿದೆ ನನಗೆ. ಆ ಮೋಡಕಾಬಾಜಾರಿನ ಮಾಲಕನಿಗೂ ಗೊತ್ತು. ನಾನು ಅವಸರದಿಂದ ಸಾಯಕಲ್ ಸವಾರನಾಗಿ ಹೋಗುತ್ತಿದ್ದರೂ ನನ್ನ ರಥವನ್ನು ನಿಲ್ಲಿಸಿ— 'ರಾಯರ ಬುಕ್ಕು ಬಂದಾವ್ರೀ' ಎಂದು ಕರೆಯುತ್ತಾನೆ. ಕನ್ನಡಿಗರ ವಾಚನಾಭಿರುಚಿಯ ಮಟ್ಟ ಎಷ್ಟು ಎತ್ತರವಾಗಿದೆಯೆಂಬುದನ್ನು ಆ ಗ್ರಂಥರಾಶಿಯಿಂದಲೆ ಕಂಡುಕೊಳ್ಳುವಂತಿರುತ್ತದೆ. ಸಾಹಿತ್ಯರಸದ ರುಚಿಯನ್ನು ಕನ್ನಡಿಗರಿಗಿಂತ ಕನ್ನಡದ ಕಿಸುನೆಲದ ಗೆದ್ದಲಿಗಳೆ ಹೆಚ್ಚು ಅರಿತಿವೆಯೇನೊ ಎಂಬಂತೆ ಪುಸ್ತಕಗಳ ಅಂಚುಗಳನ್ನೂ ಮಧ್ಯ-ಮಧ್ಯದ ಮಹತ್ತ್ವದ ಭಾಗಗಳನ್ನೂ ಅವು ಜೀರ್ಣಿಸಿಕೊಂಡುದು ಕಂಡುಬರುತ್ತದೆ.

'ಕನ್ನಡ ಬಾವುಟ'ವು ಒಮ್ಮೆ ನನಗೆ ಇಲ್ಲಿ ಆರುಕಾಸಿಗೆ ಕೈವಶವಾಗಿದೆ. ಇಷ್ಟೇಕೆ, ಒಮ್ಮೆ ಮುಚ್ಚಂಜೆಯಾದಾಗ ಕಾಯಿಪಲ್ಲೆ ತರಲು ಹೊರಟಿದ್ದೆ.

ಮೋಡಕಾಬಾಜಾರಿನ ಆ ಘಟೋತ್ಕಚ 'ರಾಯರ, ಒಂದು ಎತ್ತಲಾರದಂಥಾ ಪುಸ್ತಕ ಐತಿರಿ'—ಎಂದು ಎತ್ತಿ ಕೂಗಿದ. ಒಂದು ನೋಡುತ್ತೇನೆ—ಕಿಟೆಲ್ ಶಬ್ದಕೋಶ! 'ಯಾವ ಪುಣ್ಯಾತ್ಮ ಈ ಪುಸ್ತಕವನ್ನು ನಿನಗೆ ದಯಪಾಲಿಸಿದ್ದಾನಪ್ಪಾ'—ಎನ್ನುತ್ತ ಪುಟ ತಿರುವಹತ್ತಿದೆ. ಪುಟಕ್ಕೊಬ್ಬರ ಸಹಿ ಇತ್ತು. ಅಚ್ಚಾಗದಿದ್ದ ಮೊದಲ ಪುಟದ ತುಂಬೆಲ್ಲಾ ಸಹಿಗಳನ್ನು ಕೆತ್ತಿಬಿಟ್ಟಿದ್ದರು. 'ಅಂತೂ ಇಷ್ಟು ಜನ ಈ ಪುಸ್ತಕವನ್ನು ಮುಟ್ಟಿದ್ದಾರಲ್ಲಾ' ಎಂದಿಷ್ಟೇ ಸಮಾಧಾನಪಟ್ಟುಕೊಂಡೆ. 'ಏನಪ್ಪಾ, ಏನು ಕೊಡಬೇಕು?' ಎಂದೆ.

'ಏನು ನೀವs ನೋಡ್ರಿ. ನನಗೂ ಓಟು ತಲಬಾಗೆಯ್ತಿ.' ಆವನ ತಲಬು ನನಗೆ ತಕ್ಷಣ ಅರ್ಥವಾಯಿತು. ಸರಿ, ನನ್ನ ಸಾಹಿತ್ಯದ ತಲಬಿಗಿಂತ ಆವನ 'ಕಳ್ಳಿ'ನ ತಲಬೇ ವಿಶೇಷವಾಗಿರುವಾಗ ಕೇಳಿದಷ್ಟಕ್ಕೆ ಪುಸ್ತಕ ಕೊಟ್ಟೇ ಕೊಡುವನೆಂಬ ಭರವಸೆಯಿಂದ ಹೇಳಿದೆ—

'ಏನೊ ನಿನ........ ಪುಸ್ತಕ ಎಲ್ಲಾ ಹರಿದುಹೋಗೇತಿ. ವ್ಯಾಲಿ ನೋಡಿದು, ಬರೇ ಶಬ್ದಾರ್ಥದ ಬುಕ್ಕು. ಒಂದು ಕಥಿ ಇಲ್ಲಾ ಒಂದು ಕಾದಂಬರಿ ಇಲ್ಲಾ!'

'ಯೇಟಾರ ಕೊಡಬೇಕಂತೀರಿ?'

ಈ ತಲಬಿನ ಸಾಹಿತ್ಯ ವ್ಯಾಪಾರಿಗೆ-ಏಟೇ ಕೊಡಬೇಕೆಂದುಕೊಂಡೆ, ಪೆಟ್ಟು ಹಾಕಿ ಅಲ್ಲ.

'ನಾಲ್ಕಾಣೆ ಕೊಡತೇನಿ ನೋಡು!'

'ಏನ್ರೀ ರಾಯರ?'

'ಅದೆಲ್ಲಾ ಇಲ್ಲಾ. ಕಾಯಿಪಲ್ಲೆಗಾಗಿ ತಂದ ನಾಲ್ಕಾಣೆ ಅವೆ. ಅಷ್ಟೆ ಕೊಡೋದು' ಎಂದವನೆ ಮುಂದೆರಡು ಹೆಜ್ಜೆ ಇಟ್ಟೆ.

'ಹೂಂ, ತೆಗೀರಿ–ತೆಗೇರಿ. ಚೆಂಜಿ ಯಾಕೇವ್ರು. ಆಗ್ಯಾರ ಹೋಗ್ಲಿ. ಮತ್ತ ಯಾಂವ ಹೊತುಗೊಂಡು ಹೋಗಬೇಕು ಅಕ್ಲೀಮುಟಾ!' ಎಂದು ಭಾರವಾದ ಆ ಗ್ರಂಥವನ್ನು ನನ್ನ ಕೈಗೆ ನೀಡಿದ. ನಾಲ್ಕಾಣೆಗೆ ಎಂತಹ ಅಪರೂಪ ಕಾಯಿಪಲ್ಲೆ ಸಿಕ್ಕಿತಲ್ಲ—ಎಂದು ಹಿಗ್ಗಿ ಮುಂದೆ ಸಾಗಿದೆ. 'ಕಾವ್ಯದ ರಸದೂಟಕ್ಕೆ ಈ ಶಬ್ದಕೋಶವು ಉತ್ತಮ ಕಾಯಿ.ಪಲ್ಲೆ' ಎಂದುಕೊಂಡೆ. ಬಗಲೊಳಗೆ ಪುಸ್ತಕವನ್ನಿಟ್ಟುಕೊಂಡು ನನ್ನ ಮನೋರಥವನ್ನೇ

ರಿದೆ. ಹಾದಿಯಲ್ಲಿ ಇನ್ನೊಂದು ವಿಚಾರ—"ನನಗೇನೊ ಈ ಮಹಾ ಹೊತ್ತಿಗೆ ನಾಲ್ಕಾಣೆಯಲ್ಲಿ ದೊರಕಿತು. ಪಾಪ, ಆ ಮೋಡಕಾಬಾಜಾರಿನ ಮಾಲಕನಿಗೇನು ಲಾಭವಾಯಿತು ?"—ಎಂದುಕೊಂಡೆ. ಶೆಟ್ಟಿ ತನ್ನ ಲೆಕ್ಕ ಬಿಟ್ಟು ಇರುವನೆ ? ಇನ್ನೊಬ್ಬರಿಂದ ಅವನು ಆ ಪುಸ್ತಕವನ್ನು ಎರಡಾಣೆಗೆ ಕೊಂಡಿರದಿದ್ದರೆ ಅದನ್ನು ನಾಲ್ಕಾಣೆಗೆ ಮಾರುವುದು ಸಾಧ್ಯವಿದೆಯೆ ? ಅದನ್ನು ಎರಡಾಣೆಗೆ ಮಾರಿದ ಮಹಾರಾಯನ ತಲಬು ಎಂತಹದಿರಬೇಕು? ........ಅಥವಾ, ಮತ್ತೊಂದು ವಿಚಾರ : ಇವನೇನಾದರೂ 'ಕಳ್' ಇಗಾಗಿ ಈ ಕಳ್ಳಪೇಟೆ ಹೂಡಿದ್ದಾನೊ ? ಈ ಕಳ್ಳನಿಗೆ ಇದರ ಬೆಲೆ ತಿಳಿಯದೆ ಹೋದರೂ, ಇದನ್ನು ಮಾರಿದ ಆ ಸತ್ಯಸಂಧನಿಗಾದರೂ ಇದರ ಬೆಲೆ ತಿಳಿದಿರಬೇಡವೆ ? ತಸ್ಮಾತ್ ಇದು ಕಳ್ಳ ವ್ಯಾಪಾರವೇ........ ಎಂದುಕೊಂಡೆ. 'ಆದರೆ ಹೀಗೆ ಕಳ್ಳಪೇಟೆಗೆ ಪ್ರೋತ್ಸಾಹ ಕೊಡುತ್ತಿರುವ ನಾನು ನನ್ನ ಸಭ್ಯ ನಾಗರಿಕತೆಯನ್ನೆ ಮಾರಿಕೊಳ್ಳುತ್ತಿಲ್ಲವೆ ? ' ಎನಿಸಿತು. 'ಈಗಿನ ಜಗತ್ತು ನಿಂತಿರುವುದೆ ಕಳ್ಳಪೇಟೆಯ ಮೇಲೆ' ಎಂಬ ಸಮಾಧಾನವೂ ಕೂಡಲೆ ಬಂದರೂ ಮನಸ್ಸು ವಿಚಾರ ಕಲ್ಲೋಲದಿಂದ ಸ್ತಿಮಿತವಾಗಲಿಲ್ಲ............ ಅಥವಾ ಇದನ್ನು ಆತ ಕದಿಯುವುದಕ್ಕಾದರೂ ಹೇಗೆ ಸಾಧ್ಯವಾಗಿದ್ದಿರಬೇಕು? ........ಇಷ್ಟು ವಿಚಾರಿಸುತ್ತಿರುವಾಗಲೆ ಹೊತ್ತಿಗೆಯನ್ನು ತಂದು ಮೇಜಿನ ಮೇಲೆ ಅಪ್ಪಳಿಸಿದೆ. ಕಾಯಿಪಲ್ಲೆಯ ಸಪ್ಪಳಕ್ಕೆ ನನ್ನವಳು ಒಳಗೆ ಪುಟಿದು ಬಿದ್ದು ಹೊರಗೆ ಬಂದಳು. ಸಾಹಿತ್ಯಭಕ್ತನ ಈ ಕಾಯಿಪಲ್ಲೆಗೆ ಮೂಗು-ಮುರಿದು 'ಛಿಸ್'ಗರೆದು ಒಳಗೆ ನಡೆದಳು.

ಸಂಶೋಧಕರು ಪ್ರಾಚ್ಯ ಕ್ಷೇತ್ರವನ್ನಗಿಯುತ್ತಾರೆ. ಯಾವಾಗಲೂ ತಿಪ್ಪೆಯಲ್ಲಿ ಉಪ್ಪರಿಗೆ ಸಿಕ್ಕೀತೆಂದು ಹೇಳಲಾಗದು. ಆದರೆ ಮೋಡಕಾಬಾಜಾರಿನ ತಿಪ್ಪೆಯಲ್ಲಿ ಉಪ್ಪರಿಗೆಯೇಕೆ, ರತ್ನಗಳು ಸಿಗುತ್ತವೆ—ಕ್ಷೀರರತ್ನಗಳು. ಸಂಪೂರ್ಣ ಶೇಕ್ಸ್‌ಪಿಯರನ್ನು ಎರಡಾಣೆಗೆ ಈ ಮೋಡಕಾಬಾಜಾರಿನಲ್ಲಿ ಹುಡುಕುವುದೆಂದರೆ ಸಾಮಾನ್ಯ ಶೋಧವೆ ? ನಿಮಗೆ ಯಾವಾಗಲೂ ಇಂತಹ ಅಮೌಲ್ಯ ರತ್ನಗಳೇ ಸಿಗುತ್ತವೆಂದು ಹೇಳಲಾಗದು. ಒಮ್ಮೆ ನನ್ನ ಮಿತ್ರನೂ ನನ್ನಂತೆಯೆ ಪ್ರಯತ್ನಿಸ ಹೋದಾಗ—ಔಷಧಿಯ ಕ್ಯಾಟಲಾಗಿಗೆ ಎಂಟಾಣೆ ಕೇಳಿದನಂತೆ ಆ ವ್ಯಾಪಾರಿ. ಕಾರಣ ಇಷ್ಟೆ : ಆ ಪುಸ್ತಕದಷ್ಟು

ಅಚ್ಚುಕಟ್ಟಾದ ನುಣುಪಾದ ಹಾಳೆಗಳುಳ್ಳ, ಅನೇಕ ರಹಸ್ಯದ ಚಿತ್ರಗಳುಳ್ಳ ಗ್ರಂಥ ಇನ್ನೊಂದಿಲ್ಲ, ಎಂದ ಮೇಲೆ ಸರಿಯಲ್ಲವೆ ? ಒಂದೂ ಚಿತ್ರವಿಲ್ಲದ ಹಾಳೆಗಳೆಲ್ಲಾ ಗೆದ್ದಲಿಗಳಿಂದ ಜೀರ್ಣವಾಗಿ ಉಳಿದ ಲಕ್ಷ್ಮೀಶ ಭಾರತದ ಹಳೆಯ ಬಾಶೆಲ್‌ಮಿಶನ್ ಪ್ರಕಟನೆಯೆ ಅಲ್ಲವೆ ಅಲ್ಪ ಬೆಲೆಗೆ ದೊರೆಯ ಬಹುದಾದ್ದು ? ಆದರೆ ಯಾವುದೆ ಅಪೂರ್ವ ವಸ್ತುವನ್ನು ಶೋಧಿಸುವುದಕ್ಕೆ ಸಂಶೋಧಕನ ಕಣ್ಣು ಬೇಕೆಂಬುದು ಸುಳ್ಳಲ್ಲ. ಮೋಡಕಾಬಾಜಾರಿನಂತಹ ಹೊತ್ತಿಗೆಗಳ ರಾಶಿಯ ತಿಪ್ಪೆಯಲ್ಲಿ ಕೃತಿರತ್ನಗಳನ್ನು ಶೋಧಿಸಬೇಕಾದರೆ ರವಿಯ ಕಣ್ಣಿಗೂ ಸಾಧ್ಯವಿಲ್ಲ. ಕಳ್ಳಪೇಟೆಯ ಎಲ್ಲ ರೇಷೆಗಳನ್ನೂ ಬಲ್ಲ ಚಾಣಾಕ್ಷ ಕಣ್ಣೇ ಬೇಕು. ಹಾಗಲ್ಲದಿದ್ದರೆ ನನ್ನ ಮಿತ್ರನಿಗೆ ಯಾವ ಅಪರೂಪ ವಿರೂಪ ಗ್ರಂಥವೂ ಸಿಗದೆ, ಮರುದಿನವೇ ನನಗೇ ಯಾಕೆ ಮಿಲ್ಟನ್ ಕವಿಯ ' ಪೆರಡಾಯಿಜ್‌ಲಾಸ್ಟ್ ' ದೊರಕಬೇಕು ? ಇದಕ್ಕೆ ಅದೃಷ್ಟವೆನ್ನು ವಿರೊ ದೃಷ್ಟಿಯೆನ್ನುವಿರೊ ?

ಇದೇ ಸಂಶೋಧಕ ದೃಷ್ಟಿಯಿಂದಲೆ ' ಮೋಡಕಾಬಾಜಾರಿ 'ನ ವ್ಯುತ್ಪತ್ತಿಯನ್ನೂ ನೋಡುವುದು ಇದೀಗ ವಿಹಿತವಾಗಿ ತೋರುತ್ತದೆ. ಮಹಾಭಾರತದಲ್ಲಿ ಘಟೋತ್ಕಚನಂತಹ ಪುರಾಣ ಪುರುಷನೂ ಕಳ್ಳಪೇಟೆ ಯನ್ನು ನಡಸಿದ ಆಧಾರ ನಮಗಿರಲಾಗಿ ಕಳ್ಳಪೇಟೆಗೆ ವಿವೇಕದ ಲೈಸನ್ಸಿ ನಗತ್ಯವೇನು ? ಆದರೆ ಸರಕಾರದ ಕಣ್ಣು ತಪ್ಪಿಸಿ ಸಾಗಿಸುವ ಕತ್ತಲೆಯ 'ಕಳ್ಳಪೇಟೆ'ಗೂ ಸೂರ್ಯನ ಬೆಳಕಿನಲ್ಲಿ ಸಾರ್ವಜನಿಕರ ಕಣ್ಣು ಸೆಳೆಯು ವಂತೆ ಸರಕಿನ ಸರಸ್ವತಿಯನ್ನು ಪೇಟೆಯಲ್ಲಿ ಮಾರಾಟಮಾಡುವುದಕ್ಕೂ ಮಹದಂತರವಿದೆ. ಕಳ್ಳಪೇಟೆಯಲ್ಲಿ ಸರಕಿನ ಬೆಲೆ ಇಮ್ಮಡಿ ಮುಮ್ಮಡಿ ಹೆಚ್ಚಿ ರಬಹುದು. ಈ ಮೋಡಕಾಬಾಜಾರಿನ ಸರಸ್ವತಿಯ ಬೆಲೆ ಅಷ್ಟು ಮಟ್ಟಿಗೆ ಕಡಿಮೆ. ಇಲ್ಲಿ ಸರಕಾರವು ಸರಸ್ವತಿಯ ಬೆಲೆಗೆ ಕಂಟ್ರೋಲ್ ಹಾಕುವ ಕಾರಣವೇ ಇಲ್ಲ.

ಈ ಮೋಡಕಾಬಾಜಾರಿನ ಸ್ವರೂಪವೇ ಒಂದು ವಿಚಿತ್ರ ರೀತಿಯದು. Secondhand Book Depot ಎಂದು ಇರುತ್ತವೆ. ಪುನರ್ವಿವಾಹವಾದ ಸ್ತ್ರೀಯಂತೆಯೆ ಇಲ್ಲಿ ಗ್ರಂಥಗಳದೂ ಹಣೇಬರಹ. ಒಬ್ಬ ಒಡೆಯನನ್ನು ಕಳೆದುಕೊಂಡು ಇನ್ನೊಬ್ಬನಿಗಾಗಿ ದಾರಿಕಾಯುತ್ತಿರುತ್ತವೆ. ಇಲ್ಲಿಯ ಗ್ರಂಥ

ಗಳಿಗೊ ಅರ್ಥ ಬೆಲೆಯೊಂದರೂ ನಿರ್ಧಾರವಾದ ಒಂದು ಕ್ರಿಯವಿದೆ. ಮೋಡಕಾಬಾಜಾರು ಎಂದೊಡನೆಯೇ 'ಅನಾಥ ಬಾಲಿಕಾಶ್ರಮ' ಇದ್ದಂತೆ—ಕೈಗೆ ಸಿಕ್ಕವರನ್ನು ಕೈಬಂದಂತೆ ಮಾರುವುದು. ಈ ಅನಾಥಾಶ್ರಮದಲ್ಲಿ ಹೇಗೆ ಒಮ್ಮೊಮ್ಮೆ ಹೆಣ್ಮಣಿಗಳೂ 'ಬೀದಿಯ ನಾರಿ'ಯರಾಗುತ್ತಾರೊ ಹಾಗೆ ಮೋಡಕಾಬಾಜಾರಿನಲ್ಲಿ ಕೃತಿರತ್ನಗಳೂ ಕಸವಾಗುತ್ತವೆ.

'ಮೋಡಕಾಬಾಜಾರ' ಎಂಬ ಹೆಸರಿನಿಂದಲೆ ಇದು ಮಹಾರಾಷ್ಟ್ರದಿಂದ ಬಂದ ಹೆಸರು ಎಂದು ಕಂಡುಬರುತ್ತದೆ. 'ಮೋಡಕಾ' ಎಂಬ ಹೆಸರಿನಿಂದಲೆ ಮುರುಕುತನ ವ್ಯಕ್ತವಾಗುತ್ತದೆ. ಮುರುಕು ಜೀನಸುಗಳಿಂದ ಸುಂದರ ವಸ್ತುವನ್ನು ರಚಿಸುವ ಕೈವಾಡ ಮರಾಟಿಗರಿಗೆ ಚೆನ್ನಾಗಿ ಸಾಧಿಸಿದೆ; ಅಥವಾ ಇನ್ನೊಂದು ಗಾದೆಯಲ್ಲಿ ಹೇಳಬೇಕೆಂದರೆ, 'ಚವಲಿಯಲ್ಲಿಯೆ ಡವಲು' ಎಂದು ಹೇಳುವರಲ್ಲ—ಹಾಗೆ. ಈ ಮೋಡಕಾಬಾಜಾರು ಪುಸ್ತಕ, ಕಬ್ಬಿಣ ಸಾಮಾನು, ಚಪ್ಪಲಿ—ಯಾವುದರದೂ ಇರಬಹುದು.

ಮುರುಕು ಸಾಮಾನುಗಳನ್ನೆಲ್ಲಾ ಬೀದಿಗೆಸೆದುಬಿಡುವುದು ನಮ್ಮ ಧಾರಾಳತನ ಇದು ಇನ್ನೊಂದು ತುದಿ. ನನ್ನವಳು ಮನೆಯನ್ನು ಸ್ವಚ್ಛವಾಗಿಡುವ ಸಂಭ್ರಮದಲ್ಲಿ ಕಣ್ಣಿಗೆ ಅಂದವಾಗಿ ಕಾಣದ ಸಾಮಾನುಗಳನ್ನೆಲ್ಲ ಹೊರಗೆ ಹಾಕಿಬಿಡುತ್ತಿದ್ದಳು. ಒಮ್ಮೆ ನನ್ನ ಪುಸ್ತಕಗಳನ್ನೆಲ್ಲ ಸರಿಯಾಗಿ ಹಚ್ಚುವಾಗ ನಾಲ್ಕೆಂಟು ಗ್ರಂಥಗಳು ನೋಡುವುದಕ್ಕೆ ಬಹಳ ಅಸಹ್ಯವಾಗಿದ್ದುವೆಂದುಕೊಂಡು ಅವನ್ನು 'ಕೈಹಿಡಿ' ಯಲಿಕ್ಕೆಂದು ಒಲೆಯ ಸಂದಿಗೆ ಹಾಕಿಬಿಟ್ಟಿದ್ದಳು. ಅವಳ ಈ ಸ್ವಚ್ಛತನ ಕಡಿಮೆಯಾದುದು ನಾವು ಚಾಳಿನಲ್ಲಿಯ ಮನೆಗೆ ಬಂದಾಗ. ನಮ್ಮ ಬಲಪಕ್ಕಕ್ಕೆ ಮರಾಟೀ ದಂಪತಿಗಳಿದ್ದರು. ಅವರ ಮನೆಯಲ್ಲಿ ಒಂದು 'ಕಚರಾ ಸಾಮಾನು'ಗಳ ಕಪಾಟೀ ಮಾಡಿದ್ದರು. ಅದರಲ್ಲಿ ಕಬ್ಬಿಣದ ಮುರುಕು ವಸ್ತುಗಳು, ಹರಕು ಚಪ್ಪಲಿಗಳು, ಮಕ್ಕಳ ಹಳೆಯ ಪುಸ್ತಕಗಳು—ಅಂತೂ ಅದು ಒಂದು ಪ್ರಾಚ್ಯವಸ್ತು ಸಂಗ್ರಹ ಆಗಿತ್ತು. ಆಗಾಗ ಮೋಡಕಾಬಾಜಾರಿನ ಮನುಷ್ಯ ಬರಬೇಕು, ಅವನ್ನೆಲ್ಲ ಆತನಿಗೆ ಯೋಗ್ಯ ಬೆಲೆಗೆ ಮಾರಬೇಕು. ಇದರಿಂದ ಅವರು ಸಾಕಷ್ಟು ಹಣ ಮಾಡುತ್ತಿದ್ದರೆಂದು ತೋರುತ್ತದೆ. ಇದನ್ನರಿತು ನನ್ನವಳೂ ಒಂದು ಕಪಾಟು ಸಿದ್ಧಪಡಿಸಿದಳು. ಅದರಲ್ಲಿ ಸ್ವಲ್ಪ ಸೋರುತ್ತಿದ್ದ ಸ್ಟೋವ್

ಗ್ಲಾಸಿಲ್ಲದ ಕಂದೀಲು, ಮಳೆಗಾಲಕ್ಕೆಂದು ನಾನು ಇಟ್ಟಿದ್ದ ರಬ್ಬರ ಬೂಟು ....ಅಂತೂ ಇವಳ ಮೋಡಕಾಬಾಜಾರು ಮುಂಬಯಿಯ 'ಪ್ಲಾಯಿಟ್‌ಮಾರ್ಕೆಟ' ದಂತೆಯೆ ಆಗಿತ್ತು. ಮೋಡಕಾಬಾಜಾರಿನ ಸರಕುಗಳನ್ನು ಸಿದ್ಧಪಡಿಸುವಲ್ಲಿ ತಿಂಗಳಾ ಹತ್ತಿಪ್ಪತ್ತು ಹೊಸ ಸಾಮಾನುಗಳನ್ನು ಮನೆಗೆ ತಂದೇ ತೀರುವಂತಹ ಪ್ರಸಂಗ ಬಂತು. ಆ ವೇಳೆ ನಾನು ಆ ಚಾಳನ್ನೇ ಬಿಟ್ಟು ಹೊರತು ಬೇರೊಂದು ಉಪಾಯ ತೋರಲಿಲ್ಲ.

ಕಸದಿಂದ ರಸಮಾಡುವುದೇ ಮೋಡಕಾಬಾಜಾರಿನ ರಹಸ್ಯ. ಅದಕ್ಕೆ ತಕ್ಕ ಕಣ್ಣು ಬೇಕು. ಕವಿಯ ಸಂಸ್ಕಾರಬೇಕು. ಇತ್ತೀಚೆಗೆ ನಮ್ಮೂರಿನಲ್ಲಿಯೂ ಮೋಡಕಾಬಾಜಾರುಗಳು ಬೆಳೆಯುತ್ತಿವೆ. ಮಾರ್ಕೆಟ್ಟಿನ ಮುಖ್ಯ ಬೀದಿಗುಂಟ ಇವನ್ನು ನೋಡಬಹುದು. ಬಯಲೇ ಇವರ ಬಾಜಾರು. ತುಂಬೆಲ್ಲ ಮುರುಕು ಸಾಮಾನು ರಾಶಿ—ಕಬ್ಬಿಣದ ಮೊಳೆಗಳಿಂದ ಯಂತ್ರದ ಸಾಮಾನು ಪಲ್ಲಂಗಗಳ ವರೆಗೂ ಎಲ್ಲ ಸಾಮಾನು ಸಿಗುತ್ತವೆ ಮುರಿದು ಬೀಕಲಾದ ಒಂದು ಹಳೆಯ ಬಸ್ಸಿನ bodyಯೆ ಅವರ ಮನೆಯಾಗಿ ಬಿಟ್ಟಿರುತ್ತದೆ. ಅಲ್ಲಿಯೆ ಊಟ, ಅಲ್ಲಿಯೆ ನಿದ್ರೆ. ಇಂತಹವು ಸ್ಥಾಯಿಯಾದ ಅಂಗಡಿಗಳೇ ಎಂದು ಹೇಳಬಹುದು. ಕೆಲವು ಸಂಚಾರಿ ಅಂಗಡಿಗಳೂ ಇರುತ್ತವೆ. ಒಂದೆರಡು ಗ್ಲಾಸಿನ ದೀಪಗಳು, ನಾಲ್ಕೆಂಟು ಗೈಡು-ಕೈಪಿಡಿಗಳಂತಹ ಹೊತ್ತಗೆಗಳು; ವ್ಯಾಪಾರ ಮುಗಿಯುತ್ತಲೆ ಇದ್ದಷ್ಟು ಸಾಮಾನು ಬುಟ್ಟಿಗೆ ಸೇರಿಸಿ ಎದ್ದುಬಿಡುವರು.

ಹಿಂದೊಮ್ಮೆ ಕೆಲವು ಜಪಾನೀ ಯಾತ್ರಿಕರು ಬಂದಿದ್ದರು. ಅವರ ಕೈಯ ಕುಶಲತೆಯೆಂದರೆ ಬೆರಳು ಕಚ್ಚುವಂತಹದು. ಪುರುಷನೂ ಹಾಗೇ, ಸ್ತ್ರೀಯರೂ ಹಾಗೇ. ಒಂದಾಣೆಯ ಕಬ್ಬುಕೊಂಡು, ಅದನ್ನು ತಿಂದು ರಸವುಂಡು ಉಳಿದ ಬೆಂಡಿನಿಂದ, ಕಬ್ಬಿನ ಸಿಗುರಿನಿಂದ ಸುಂದರವಾದ ಹೂಗಳನ್ನು ರಚಿಸಿ ನಮ್ಮ ಮುಂದೇ ಆಣೆಗೊಂದರಂತೆ ಮಾರಾಟ ಮಾಡಿದರು. ಕಸದಲ್ಲಿ ರಸವನ್ನು ತುಂಬುವ ಅವರ ಕೌಶಲ್ಯಗಳಿಗೆ ನಾನು ತಲೆಬಾಗಿದೆ. ಯಾವ ಮೋಡಕಾಬಾಜಾರು ಈ ಸೃಷ್ಟಿಗೆ ಸಮತೂಕವಾದೀತು ?

# ಮೀಸೆಯ ಕಂಸ

"To be or not to be" ಎಂಬ ಪ್ರಶ್ನೆ ಹ್ಯಾಮ್ಲೆಟ್ಟನಿಗಾಗಿದ್ದರೆ ನನಗೊ ಆಜೀವ ಘೋರ ಪ್ರಶ್ನೆ !— "To keep or not to keep." ಮೀಸೆಗಳನ್ನು ಇಡಬೇಕೊ ಬೇಡವೊ ಎಂದು. ಮೀಸೆ ಹೊತ್ತವನು ಗಂಡು ಸೆಂದು ಇಟ್ಟುಕೊಂಡರೆ ಫ್ಯಾಶನ್ನು ತದ್ವಿರುದ್ಧವಾಗಿರುವುದು. ಫ್ಯಾಶನ್‌ನ ಪ್ರವಾಹದ ಗುಂಟೆ ಹೋಗಿ ಒಮ್ಮೆ ಮೀಸೆ ತೆಗೆದಾಗ ನಮ್ಮ ತೀರ್ಥರೂಪರು ನನ್ನ ಮಗ್ಗುಲ ಮಡಚಿಬಿಟ್ಟರು. ಅಯೋಗ್ಯ, ಇನ್ನೂ ನಾನು ಜೀವಂತ ಇದ್ದಾಗಲೇ ಈ ಅವಲಕ್ಷಣವೇ ಅಂತ ! ಗಂಡಸಿಗೆ ಮೀಸೆ ಬೇಕಲ್ಲವೆ ? ಆದರೆ ನಮಗೂ ಏಕೆ ಬೇಡ ಎಂಬ ಸಮತಾಪಟುಗಳಾದ ಅನೇಕ ಹೆಂಗಳೆ ಯರ ಮುಖದ ಮೇಲೂ ಇತ್ತೀಚಿಗೆ ನಾನು ಕರಿಯ ಎಳಚಿಗುರುಗಳನ್ನು ಕಂಡಿದ್ದೇನೆ. ಹೀಗೆಂದಾಗ ಒಂದು ತಮಾಷೆ ನೆನಪಾಗುತ್ತದೆ 'ಮೀಸೆ ಯೊಂದಿಲ್ಲದಿದ್ದರೆ ನೀನು ಹೆಂಡತಿಯಂತೆ ಕಾಣಬಹುದಾಗಿತ್ತು' ಎಂದು ಒಬ್ಬನೆಂದಾಗ ಮಿತ್ರನು 'ನನಗೆಲ್ಲಿವೆ ಮೀಸೆ?' ಎಂದನಂತೆ.'ಮೀಸೆ ಇದ್ದುದು ನಿನಗಲ್ಲ ನಮ್ಮವರಿಗೆ' ಎಂದು ಬಂತಂತೆ ಉತ್ತರ. ಮೀಸೆ ಹೊತ್ತ ಗಂಡಸೂ ಬೇಡ, ಮೀಸೆ ಇಲ್ಲದ ಹೆಂಗಸೂ ಬೇಡ ಎಂದು ಹಿಟ್ಲರನಂತೆ ಎಷ್ಟೋಸಲ ಅರೆಮೀಸೆಯಿಟ್ಟು ನೋಡಿದೆ. ಇದರಿಂದ ನನಗೆ ಮೀಶೆ ಕಡಿ ಯುವುದೊಂದು ಚಟವೇ ಸೇರಿಕೊಂಡಿತು. ಸಾಲದುದಕ್ಕೆ ನನ್ನ ಚಿಕ್ಕ ತಮ್ಮ ಯಾವಾಗಲೂ ಚೇಷ್ಟೆ ಮಾಡಬೇಕು. 'ಅಣ್ಣನ ಮೂಗಿನ ಕೆಳಗೆ ಗುಂಗಾಡು ಮನೆ ಮಾಡಿದೆ ಅಂತ.' ಆದರೆ ಹಿಟ್ಲರನ ತರುವಾಯ ಅವನ ಮೀಸೆಯೂ ನಾಶವಾಗಿಹೋಯಿತು. ಕೆಲವು ಸಿನಿಮಾ ಹಿರೋಜ ಎಂದರೆ ವಿಶೇಷವಾಗಿ Stunt heroes ಗಳ ಫ್ಯಾಶನ್ನು ಬಳಕೆಗೆ ಬಂತು—ಕಟ ವಾಯಿವರೆಗೂ ಸಣ್ಣ ರೇಖೆಯಂತೆ ಮೀಸೆ ಬಿಡುವುದು, ಬಿದಿಗೆಯ ಚಂದ್ರ ನಂತೆ. ಈ ರೇಖೆ, ಕೆಲವರಲ್ಲಿ ತದಿಗೆ, ಚವತಿಯ ಚಂದ್ರರಂತೆ ಸ್ವಲ್ಪ ದಪ್ಪ ವಾಗಿ ಜಾಡವಾಗಿಯೂ ಕಂಡು ಬರುತ್ತಿತ್ತು. ಈ ಫಾಶನ್ನು ಇನ್ನೂ ಅನವಸ್ಥೆ

ಗೀಡಾಗಿರದಿದ್ದರೂ ನನಗೇಕೊ ಇದು ಅಷ್ಟೊಂದು ಹಿಡಿಸಲಿಲ್ಲ. ಇಂತಹ ಮೀಸೆ ಬಿಟ್ಟವರು ಮುಂಬಯಿಯಂತಹ ಪಟ್ಟಣಗಳಲ್ಲಿ ಕಿಸೆಕತ್ತರಿಗಳಾಗಿ ರುತ್ತಾರೆ ಎಂದು ನನ್ನ ಭಾವನೆ. ಅಂತೆಯೆ ಇಂತಹ ಸಿಸ್ತು ನನಗೆ ಸೇರ ಲಿಲ್ಲ. ಮೀಸೆಯನ್ನು ಪೂರ್ಣ ತೆಗೆಯದೆ ಇನ್ನೆಷ್ಟು ವಿಧವಾಗಿ ಮೇಲ್ತುಟಿಯ ಮೇಲೆ ಇಡುವುದಕ್ಕೆ ಬರುತ್ತದೊ ಎಂಬದಕ್ಕೆ ದೊಡ್ಡದೊಂದು ಸಂಶೋಧನ ವನ್ನೆ ನಡಸಿದೆ. ಇತಿಹಾಸಕಾಲದಿಂದ ಮೀಸೆಯ ಬೆಳೆವಣಿಗೆಯನ್ನು ಅಭ್ಯಾಸ ಮಾಡತೊಡಗಿದೆ. ಮಹಾರಾಷ್ಟ್ರದ ವೀರನಾಯಕರ ಕಲ್ಲಿಮೀಸೆ ಒಂದಿಷ್ಟು ಮನಸ್ಸು ಹಿಡಿಯಿತು. ನಮ್ಮೂರಿನಲ್ಲಿ ಒಬ್ಬ ಅಧಿಕಾರಿ ಇದೇ ತರಹ ಮೀಸೆ ಇಟ್ಟಿದ್ದರು. ಅವರು ಸಂತೆ ಪೇಟೆ ಮಾಡುವಾಗ ಎರಡು ಹಣ್ಣಿನ ಬುಟ್ಟಿಗಳನ್ನು ಕಲ್ಲಿಮೀಸೆಗಳ ಇಕ್ಕೆಲದಲ್ಲೂ ಇಟ್ಟುಕೊಂಡು ಸಹಜ ವಾಗಿ ನಡೆದುಕೊಂಡು ಹೋಗುತ್ತಿದ್ದರಂತೆ ! ಆದರೆ ಪಾಪ, ಬಡಪಾಯಿ ಯಾದ ನನಗೆ ಬುಟ್ಟಿ ಹೊರುವುದಿರಲಿ, ಕಲ್ಲಿಯ ಮೀಸೆಗಳನ್ನು ಹೊರುವ ತ್ರಾಣವಾದರೂ ಬೇಡವೆ ? ಅಂತೂ ಕಲ್ಲಿಮೀಸೆಗೂ ಸಂಚಕಾರ ಬಂತು. ಆಮೇಲೆ ನಮ್ಮ ನೆರೆಮನೆಯ ' ಮೀಸೆಮಾಮಾ 'ನ ನೆನಪು ಬಂತು. ಮೀಸೆ ಮಾಮಾನ ವೈಶಿಷ್ಟ್ಯವೆಂದರೆ ಮೀಸೆ ಅಡ್ಡವಾಗಿ ಬೆಳೆಯಿಸದೆ ಉದ್ದವಾಗಿ ಬಿಟ್ಟಿದ್ದರು. ಅವರಿಗೆ ಬಾಯಿಯೆಂಬುದಿದೆಯೆಂಬುದು ಎಷ್ಟೋ ಜನರಿಗೆ ಗೊತ್ತಿರಲಿಲ್ಲ. ಬಾಯಿತೆರೆದಾಗಲೂ ಕೂಡ ಬಾಯೊಳಗೂ ಮೀಸೆಗಳೆ ಬೆಳೆ ದಂತೆ ದಟ್ಟಡವಿಯಂತೆ ತೋರಬೇಕು ಮೀಸೆಮಾಮಾ ಚಹಾ ಕುಡಿಯು ವಾಗ ನೋಡಬೇಕು. ಮೀಸೆಗಳೆಲ್ಲಾ ಸಿಂಹದ ಆಯಾಲಿನಂತೆ ಬಸೆಯಲ್ಲಿ ಹಾಯಾಗಿ ಈಸಾಡುತ್ತಿರುವಾಗ ಚಹವು ಮೀಸೆಗಳಿಂದ ಫಿಲ್ಟರ ಆಗಿ ಒಳಗೆ ಹೋಗುತ್ತಿತ್ತು. ಮಾಮಾನ ಹೆಂಡತಿ ಮಾಮಿ ಚಹ ಸೋಸುವುದೇ ಇಲ್ಲ. ಹಾಗೇ ಚಹ ಮಾಡಿಕೊಟ್ಟು ಬಿಡುತ್ತಾರೆ. ಮಾಮಾನ ಮೀಸೆಯ ಸಂದು ಗಳೊಳಗಿಂದ ಚಹಾ ಸೋಸಿ ಹೋಗುತ್ತಲೆ ಚಹಾಪುಡಿಯೆಲ್ಲಾ ಮೀಸೆಗಳಿಗೆ ಅಂಟಿಕೊಂಡಿರುತ್ತದೆ; ಆ ಮೇಲೆ ಸವಡಿಯ ಪ್ರಕಾರ ಪುಡಿಯನ್ನು ಕೊಡವಿ ಕೊಳ್ಳುತ್ತಾರೆ ಎನ್ನುತ್ತಿದ್ದರು. ಒಂದು ದಿನ ಮೀಸೆಮಾಮಾನ ಮೊಮ್ಮಗಳು ಒಂದು ವರುಷದ ' ಬೇಬಿ ' ಮಾಮಾನ ಮೀಸೆಗೆ ಜೋತು ಬಿದ್ದಾಗ ಮಾಮಾ ಒದ್ದಾಡಿದ ಪರಿಯನ್ನೂ ಅದನ್ನು ಕಂಡು ಬೇಬಿ ಕುಣಿದಾಡಿದ

ಬಗೆಯನ್ನೂ ಜನ ಇನ್ನೂ ಕತೆ ಮಾಡಿಹೇಳುತ್ತಾರೆ. ಸರಿ, ಮೀಸೆ ಮಾಮಾನಂತೆ ನಾನು ಮೀಸೆ ಬಿಟ್ಟರೆ ನನ್ನ ಮೇಲ್ದುಟಿಯೆ ಹರಿದು ಬಿಡುವ ಫಜೀತಿಯೆಂದು ಆ ವಿಚಾರವನ್ನೂ ಬಿಟ್ಟ್ವಡಾಯಿತು. ಇದೂ ಅಲ್ಲದೆ ಸೂಜಿತುದಿಯ ಮೀಸೆ, ಡಬ್ಬಣಕಾಟಿಯ ಮೀಸೆ, ಜೊಂಡುಮೀಸೆ, ಪಚ್ಚೆಮೀಸೆ, ಹಲ್ಲಿಯ ಮೀಸೆ, ಹಾವಿನ ಅಂಕುಡೊಂಕುಮೀಸೆ, ನೊಣದಮೀಸೆ, ಕುದುರೆನಾಲಿನ ಮೀಸೆ, ಕಾಮನಬಿಲ್ಲಿನ ಮೀಸೆ, ಶಿವಧನುಸ್ಸಿನ ಮೀಸೆ, ಜೋಕಾಲಿಯಮೀಸೆ, ತಗಣಿಮೀಸೆ, ಗೆದ್ದಲಿಮೀಸೆ, ಗುದ್ದಲಿಮೀಸೆ, ರಂಟೆಯಮೀಸೆ, ಕುಡಗೋಲಿನ ಮೀಸೆ, ಮೀಸೆಕಂಸಿನ ಮೀಸೆ ಹೀಗೆ ಎಲ್ಲಾ ಎಲ್ಲಾ ಪ್ರಕಾರದ ಮೀಸೆಗಳನ್ನು ಪ್ರಯೋಗಮಾಡಿ ನೋಡಿದೆ. ನನಗೊಂದೂ ಪ್ರಕಾರದ ಮೀಸೆ ಹಿಡಿಯಲಿಲ್ಲ. ನಾನು ಇಷ್ಟೆಲ್ಲಾ ಪ್ರಯೋಗಮಾಡಿ ಸದ್ಯದ ಸೌಂದರ್ಯದ ನೆಲೆಯನ್ನಿನ್ನೂ ಕಾಣದೆ ಹೆಣಗಾಡುತ್ತಿರುವಾಗ ಸುದೈವದಿಂದಲೊ ದುರ್ದೈವದಿಂದಲೊ ನಮ್ಮ ತೀರ್ಥರೂಪರು ವೈಕುಂಠವಾಸಿಗಳಾದರು. ಸರಿ. ಇನ್ನೇನು ಲೈಸನ್ಸೇ ಸಿಕ್ಕಿತೆಂದು ಅಂದಿನಿಂದ ಮೀಸೆಗೆ ಸಂಪೂರ್ಣ ಟ್ರ್ಯಾಕ್ಟರ್ ಹಚ್ಚಿ ಬಿಟ್ಟೆ. ನನ್ನ ಮೀಸೆಯ ಜೊತೆಗೆ ನಾನು ನಡಸಿದ ಪ್ರಯೋಗಗಳೆಂದರೆ ಮಾನವಕುಲದ ಮೀಸೆಯ ಇತಿಹಾಸದ ಒಂದು ಸುವರ್ಣ ಪುಟವಾಗಿದೆಯೆಂದರೆ ಯಾರೂ ಇದು ಅತಿಶಯೋಕ್ತಿಯೆಂದು ಕರೆಯಲಾರರು.

# ಕಾಂಪ್ಲಿಮೆಂಟರಿ

ಸುಪ್ರಸಿದ್ಧ ಕಂಪನಿಯಾದ ಸರಸ್ವತಿ ಪ್ರಾಸಾದಿಕ ಸಾಹಿತ್ಯ ಸಂಗೀತ ನಾಟಕ ಕಂಪನಿ ಬರಲಿದೆ ಎಂದು ಅದರ ಅಡ್ವಾನ್ಸು ಮ್ಯಾನೇಜರು ನಮ್ಮೂರ ಬಸ್ಸು ಸ್ಟ್ಯಾಂಡಿನಲ್ಲಿ ಹೇಳಿದ್ದೊಂದೇ ತಡ, ಊರವರೆಲ್ಲರೂ ಓಡಿ ಬಂದು ಅವನನ್ನೇ ನೋಡಿದರು-ತಿಕೀಟು ಇಲ್ಲದಲೆ. ಸಾಲ್ಬ ಜವಾನನು ಹುಲಿಯನ್ನು ಹೊಡೆದಾಗಲೂ ಸಹ ಇಷ್ಟು ಜನರು ಸೇರಿರಲಿಲ್ಲ ನಮ್ಮೂರಲ್ಲಿ. ಮುಖ್ಯ ಕುಪ್ಪಂಣನ ಪುಣ್ಯ. ಅಡ್ವಾನ್ಸ ಮ್ಯಾನೇಜರನು ಇವನ ಪಾಲಿಗೆ ಸಾಕ್ಷಾತ್ ಲಕ್ಷ್ಮಿಯಂತೆ ಬಂದಿದ್ದ. ದಿವಾಳಿಗೆ ಹಾದಿ ಹಿಡಿದು ಹಣ ಕೊಟ್ಟ ರುಮಾಲ ದವರಿಗೆ ಕೈಕೊಟ್ಟು ಬೆಳಗಿನ ಗಾಡಿಗೆ ಪಾರಾಗಬೇಕೆಂದಿದ್ದ ಆದೇ ಹೋಟೆಲ ಕುಪ್ಪಂಣ ಒಂದೇ ತಿಂಗಳಲ್ಲಿ ಬೆಂಣೆ ಬಾವಗನಂತಾಗಿ ಊರ ಗೌಡನ ಮಗನೊಡನೆ ಪೋಟಿ ಹೂಡುವಂತಾದ, ಒಂದು ಹೆಣ್ಣಿನ ಬಾಬಿನಲ್ಲಿ. ಅದೆಷ್ಟು ಜನರೋ ಅಡ್ವಾನ್ಸು ಮ್ಯಾನೇಜರನನ್ನು ಈ ಹೋಟೆಲಲ್ಲಿ ಮೇಯಿಸುವವರು ! ಕಾಂಗ್ರೆಸ ಸರಕಾರದ ಕಾಲದಲ್ಲಿ ಸಹ ಅವನಿಗೆ ಸಕ್ಕರೆ ಕಾಫಿ !

ಗೋಕರ್ಣೇಶ್ವರನ ಗುಡಿಯ ಹಿಂದೆ ಎಂಟೇ ದಿನದಲ್ಲಿ ಎದ್ದುಬಿಟ್ಟಿತು ಭವ್ಯವಾದ ಬಟ್ಟಬಯಲ ದಿವ್ಯತಂಬೂ. ಮೇಲೆ ಒಳ್ಳೆಯ ಆಕಾಶದ ಹೊದಿಕೆ. ಮೀನ ಬಲೆಯನು ಮೀರಿಸುವಂತಹ ಚಿಂದಿಗಳು ಮ್ಯಾನೇಜರನು ನಿರ್ಮಿಸಿದ ಸ್ಟೇಜಿನ ಗೋಡೆಗಳು. 'ಕುಲೀನ ಸ್ತ್ರೀಯರಿಗೆ ಪ್ರತ್ಯೇಕ ಸ್ಥಳ' 'ಗಲಾಟೆ ಮಾಡುವವರನ್ನು ಪೋಲೀಸರ ತಾಬೇಕ್ಕೆ ಕೊಡಲಾಗುವುದು,' 'ಸಂದರ್ಭಾನುಸಾರ ತಿಕೀಟಿನ ದರಗಳನ್ನು ಹೆಚ್ಚು ಕಡಿಮೆ ಮಾಡುವ ಹಕ್ಕು ನಮ್ಮದು,' 'ಒನ್ಸಮೇರ್ ಎಂದಲ್ಲಿ ಪಾರ್ಟಿದಾರರ ಇಷ್ಟ' 'ಸ್ತ್ರೀಯರೇ ಸ್ತ್ರೀ ಪಾತ್ರವನ್ನು ವಹಿಸುವರು' 'ಹೊಸ ಹೊಸ ಡ್ರೆಸ್ಸುಗಳು-ಅದ್ಭುತ ಸೀನರಿಗಳು' 'ಹನುಮಂತಪ್ಪನವರು ನಕಲಿ ಪಾರ್ಟು ಮಾಡುತ್ತಾರೆ' 'ನಮ್ಮಲ್ಲಿ ಕಾಲ ಪಿಯಾನ ಇದೆ,' 'ಬೀಡಿ ಚುಟ್ಟ ವಗೈರಾ ಸೇದಬಾರದು'

ಮುಂತಾದ ಮಾಮೂಲು ಷರಾಗಳೊಂದಿಗೆ ಬಂಣ ಬಂಣದ ನೋಟಿಸು ಗಳು ಅಚ್ಚಾಗಿ ಬಂದೇಬಿಟ್ಟವು. ಮೊಟ್ಟಮೊದಲೇ ಸಾಮಾಜಿಕ ನಾಟಕ —ಇರಲೇ ಬೇಕಲ್ಲ ವುಟ್ಟ ವಿಧವೆ ?

ನಮ್ಮೂರಲ್ಲಿ ನಾನೊಬ್ಬ ಕಾಂಪ್ಲಿಮೆಂಟರಿ ಕಲಾಭಿಮಾನಿ ಎಂದು ಅವರಿಗೆ ಯಾರೋ ತಪ್ಪು ಕಲ್ಪನೆ ಕೊಟ್ಟಂತಿತ್ತು. ಸಾಲ ಕೊಡುವ ಸೊಸಾ ಯಿಟಿಯಲ್ಲಿ ನಾನು ಅಧಿಕಾರಿಯಾಗಿದ್ದಕ್ಕೆ ಅವರು ನನ್ನ ಮೇಲೆ ಕಲಾಭಿ ಮಾನಿಯೆಂಬ ಆರೋಪ ಹೊರಿಸಿರಲಿಕ್ಕೂ ಸಾಕು. ಅಂತೂ ಇಂತೂ ಕಂಪ ನಿಯ ಸಾಕ್ಷಾತ್ ಮಾಲಕರೇ ಮನೆ ಬಾಗಿಲಿಗೆ ಬಂದು ಕೈಮುಗಿದು ಕಾಫಿ ಕುಡಿದು ಕಾಂಪ್ಲಿಮೆಂಟರಿ ತಿಕೀಟನ್ನು ( ಇಡೀ ಕುಟುಂಬಕ್ಕೆ ) ಕೊಟ್ಟು ಮುಲಾಜೆಯ ಬಾವಿಯಲ್ಲಿ ನನ್ನನ್ನಂತೂ ದೂಡಿಬಿಟ್ಟರು. ಬರುವಾಗ ನಿಮ್ಮ ಕುರ್ಚಿಗಳನ್ನೇ ತೆಗೆಯಿಸಿಕೊಂಡು ಬನ್ನಿರಿ ಎಂದು ಸೂಕ್ಷ್ಮವಾಗಿ ಸೂಚಿಸಿ ಹಾದಿ ಬಿಟ್ಟರು. ಅವಸರದಲ್ಲಿ ಊಟ ಮುಗಿಸಿ ನಾನು ಮತ್ತು ನನ್ನ ಇಡೀ ಕುಟುಂಬ ( ಅಂದರೆ ನನ್ನ ಇಡೀ ಹೆಂಡತಿ ) ಎಲ್ಲರಕಿಂತಲೂ ಮುನ್ನೆಯೇ ಹೊಲಿಗೇರಿ ಕಂಪನಿಯ ತಂಬೂದ ಮುಂದೆ ಬಂದು ನಿಂತೆವು. ಊರಮ್ಮನ ಮುಂದೆ ಕೋಣ ಕಡಿಯುವಾಗ ಬಾರಿಸುವ ಜೋಡು ತಪ್ಪಟೆ ಗಳನ್ನು ಉರಿಗೆ ಕಾಸಿ ಕಾಸಿ ಜಗ್ಗಡಿ ನಕ ನಕ್ಕ ಎಂಬ ಗತ್ತು ಹಿಡಿದು ಬಾರಿಸುತ್ತಿದ್ದರು. ಕರ್ಣತ್ರಾಣಕ್ಕೆ ಕಾಯಂ ಹಾನಿ ಯಾದೀತೆಂಬ ಭಯ ದಿಂದ ಅಲ್ಲಿ ನಿಲ್ಲದೆ ದಿವ್ಯವಾದ ಭವ್ಯ ತಂಬೂದಲ್ಲಿ ತೂರಿದೆವು. ಮುಂದಿನ ಎರಡು ಸಾಲು ಬೆಂಚುಗಳು ಮಾತ್ರ ( ಕುರ್ಚಿಗಳು ಇರಲೇ ಇಲ್ಲ ) ತುಂಬಿ ದ್ದವು. ಪರವಾ ಇಲ್ಲ, ಸರಸ್ವತಿ ಪ್ರಸಾದಿಕ ಕಂಪನಿಗೆ ಕೊಂಚ ಹಣ ಆಗಿದೆ ಎಂದು ಅಂದುಕೊಂಡೆ. ಆ ಮೇಲೆ ತಿಳಿಯಿತು, ಆ ಮುಂದಿನ ಬೆಂಚಿಗಳನ್ನು ಗುತ್ತಿಗೆ ಹಿಡಿದವರು ಮರ್ಯಾದಸ್ಥರೆಂದು—ಪೋಲೀಸು, ಮ್ಯಾಜಿಸ್ಟ್ರೇಟು ಹೆಲ್ತು, ಯೂನಿಯನ್ನು, ಸಾಲಕೊಟ್ಟ ಸೆಟ್ಟರು, ಕಿರಾಣಿ ಸಾಮಾನುಗಳನ್ನು ಉದ್ದರಿ ಕೊಟ್ಟವರು, ಕೊನೆಗೆ ಸಾಹುಕಾರ ಕುಪ್ಪಂಣ–ಇದರಲ್ಲಿ ತಿಕೀಟು ಕೊಳ್ಳುವ ದರಿದ್ರರಾರು ? ಇದ್ದುದರಲ್ಲಿಯೇ ನಾಲ್ಕಾಣೆಯ ಸ್ಥಳವೇ ಕೊಂಚ ಮೇಲು. ಆದರೂ ಅದರಲ್ಲಿ ಹದಿನೈದಾಣೆ ಬಾಬದಾರರೇ. ಮುಂದೆ ಕುಳಿತ ಮರ್ಯಾದಸ್ಥರ ಆಳುಗಳು ಹಲವರು, ಉಳಿದವರು ಸ್ಟೇಜು ಕಟ್ಟು

ವಾಗ ಮಂಚ ಕಡಿದವರು, ಜೊಂಬುಗಳಗಳನ್ನು ಹೊಳಿದವರು, ಮತ್ತಿತರ ಉಮೇದುವಾರೀ ಕಾರ್ಮಿಕರು. ಕುಲಹೀನ ಸ್ತ್ರೀಯರಿಗಾಗಿ ಕಾದಿರಿಸಿದ್ದ ಪ್ರತ್ಯೇಕ ಸ್ಥಳದಲ್ಲಿ ಕುಪ್ಪಂಣನ ಹೆಂಗಸು ಮಾತ್ರ ರಾರಾಜಿಸುತ್ತಿದ್ದಳು.

'ನಾನು ಕಳಿಸಿದ ಕುರ್ಚಿಗಳು ಎಲ್ಲಿ ?' ಎಂದು ಬಾಗಿಲಲ್ಲಿ ಕುಳಿತಿದ್ದ ಮ್ಯಾನೇಜರನನ್ನು ಕೇಳಿದೆ. ಅಲ್ಲಿಯೇ ಇದ್ದಿತು ಅವನ ಬುಡದಲ್ಲಿ. ಇನ್ನೊಂದನ್ನು ಪಡದೆ ಕಟ್ಟಲು ಒಳಗೆ ಒಯ್ದಿದ್ದಾರೆಂದು ಹೇಳಿ ಮಾತನ್ನು ನಗುವಿನಲ್ಲಿ ತೇಲಿಸಿ ಕೈಯಲ್ಲಿದ್ದ ಬೀಡಿಯನ್ನು ಹಲ್ಲಿನಿಂದ ಕಚ್ಚಿ ಕಡ್ಡಿಪೆಟ್ಟಿಗೆಗಾಗಿ ಕೈ ಸೌಜ್ಞೆ ಮಾಡಿದ. ಕೊಟ್ಟೆ. ಎತ್ತಲೋ ನೋಡುತ್ತ ಏನನ್ನೋ ಪಟಗುಟ್ಟುತ್ತ ಕಡ್ಡಿಪೆಟ್ಟಿಗೆಯನ್ನು ಕಿಸಿಗೆ ಹಾಕಿ ಬಂಣದ ಮನೆಯಲ್ಲಿ ನುಗ್ಗಿದ. ಪಾಪ! ಮೂವತ್ತು ವರುಷದ ಅಭ್ಯಾಸ; ಅವನಿಗಿನ್ನೂ ಮೂವತ್ತೈದು ವರ್ಷ ವಯಸ್ಸು.

ಕಡೆಗೂ ನನ್ನ ಕುರ್ಚಿಗಳೆರಡೂ ದೊರೆತವು. ಇಬ್ಬರೂ ಕುಳಿತೆವು. ತುಸು ಸಮಯದನಂತರ ಪಡದೆಯ ತೂತಿನಲ್ಲಿ ಹೆಣೆ ಇಕ್ಕಿ ನೋಡಿ ಮಾಲಕರು ಹಣಕೊಟ್ಟು ಬಂದವರೆಷ್ಟು ಮಂದಿ ಎಂದು ಸಿಂಹಾವಲೋಕನ ಮಾಡಿದರು. ಕುಳಿತವರೆಲ್ಲರನ್ನೂ ಗುರುತಿಸಿದ ಮೇಲೆ ಅವರ ಸಿಂಹಾವಲೋಕನವು ಗ್ರಾಮಸಿಂಹಾವಲೋಕನವಾಗಿರಬೇಕೆನಿಸಿತು. ಆದರೂ ಎದೆಗುಂದುವುದು. ನಾಟಕ ಕಂಪನಿಯ ಕಸುಬಲ್ಲವಲ್ಲ? ಕೈಸನ್ನೆ ಮಾಡಿ ನನ್ನನ್ನು ಆದೇಕೋ ಕರೆದರು. ಬಣ್ಣದ ಮನೆಗೆ ಹೋಗಲು ಎದ್ದೆ. ಆದರೆ ಕೂಡಲೆ ನೆನಪಾಯಿತು, ಕುರ್ಚಿ. ನನ್ನೆ ಅವಳ ಬದಿಯಲ್ಲಿ ಯಾರಾದರೂ ಕೂಡ್ರುವರೆಂಬ ಭಯದಕಿಂತಲೂ ನನ್ನ ಇದ್ದೊಂದೇ ಕುರ್ಚಿಯೂ ಹೋದರೆ? ಕಂಕುಳಲ್ಲಿದ್ದ ಕಾಸ್ಮೀರದ ಕೆಂಪು ಶಾಲನ್ನು ಕುರ್ಚಿಯ ಮೇಲಿಟ್ಟು, ಒಳ ನಡದೆ. ನನ್ನೆರಡೂ ಕೈಗಳನ್ನೂ ಹಿಡಿದು ಬರಮಾಡಿಕೊಂಡ ಮಾಲಕರು ನಿಮ್ಮ ಟೈಯನ್ನು ಕೊಂಚ ಕೊಡಿರಿ, ಅಳಿಯನ ಪಾರ್ಟ ಮಾಡುವ ಹುಡುಗನಿಗೆ ಬೇಕಾಗಿದೆ ಎಂದು, ನನ್ನ ಕತ್ತಿಗೆ ಕೈಹಾಕೇಬಿಟ್ಟರು. ಸಾಧ್ಯವಿಲ್ಲವೆಂದು ಸಿಟ್ಟಾಗಬೇಕೋ ನಗುತ್ತ ತೆಗೆದುಕೊಳ್ಳಿ ಎನ್ನಬೇಕೋ ಎಂದು ನಾನಿನ್ನೂ ಮೀನ ಮೇಷ ಮಾಡುತ್ತಿರುವಾಗಲೇ ಅವರ ಜಗ್ಗಾಟ

ದಿಂದ ಟ್ರೈಯು ಉರಲು ಬಿದ್ದಿತು. ಕೂಡಲೆ ಬಿಚ್ಚಿಕೊಟ್ಟು ಪಾರಾಗಿ ಹೊರಬಂದೆ.

ಕಳೆದ ಕರುವನ್ನು ಹುಡುಕಿ ಇಲ್ಲಿಂದು ಮನೆಗೆ ಬಂದಾಗ ಅವೂ ತಪ್ಪಿಸಿಗೊಂಡಿದೆ ಎಂದು ಕೇಳಿದಷ್ಟು ಸಂತಸವಾಯಿತು. "ಅತ್ತೆಯ ಪಾರ್ಟಿ ಮಾಡುವ ಪಾಂಡುರಂಗ ನಿಮ್ಮ ಶಾಲನ್ನು ಕೊಂಡೊಯ್ದ " ಎಂದು ಅವಳು ನಗುತ್ತ ಹೇಳಿದಳು. ಅತ್ತೆಗೇಕೆ ಬೇಕಂತೆ ಆ ಕೆಂಪು ಶಾಲು ಎಂದು ಹುಬ್ಬೇರಿಸಿದೆ. "ವಿಧವೆ ಪಾರ್ಟಿಗೆ ಕೆಂಪು ಸೀರೆ ಇಲ್ಲವಂತೆ. ಅದಕ್ಕೇ ಆ ಶಾಲನ್ನೇ ಉಡುತ್ತಾನಂತೆ. ತಂದು ಕೊಡುತ್ತಾನೇಳಿ, ಅದಕ್ಕೇಕೆ ಅಷ್ಟು ಯೋಚನೆ " ಎಂದು ನನ್ನನ್ನೇ ಸಂತೈಸಿದಳು.

ಸದ್ಯ ಮೊದಲನೆಯ ಯಾಮದಲ್ಲಿಯೇ ಮೊದಲನೆಯ ಗಂಟೆಯು ಆಯಿತು. ಗಲ್ಲಿ ಮೀಸೆಯ ಸ್ಥೂಲ ಕಾಯದವನೊಬ್ಬ ಏನನ್ನೋ ಕಳೆದು ಕೊಂಡವನಂತೆ ಹುಡುಕುತ್ತ ಬಂದ. ಸನಿಯ ಬಂದಾಗ ಕೇಳಿದೆ.

" ಇನ್ನೂ ಏಕಯ್ಯಾ ತಡ ? "

" ಎಲ್ಲರಿಗೂ ಡ್ರೆಸ್ಸು ದೊರೆತಿಲ್ಲ ಸ್ವಾಮಿ, ಪಡದೆ ಎತ್ತಿ ಏನು ಮಾಡಬೇಕು ?" ಎಂದವನೇ ತನ್ನ ಹುಡುಕುವ ದೃಷ್ಟಿಯನ್ನು ನನ್ನ ಚರಣಾರವಿಂದದ ಮೇಲೆ ಚೆಲ್ಲಿದ. ನೋಡಬೇಕಿತ್ತು ನೀವು ಅವನ ಮುಖವನ್ನು-ಅಮೇರಿಕೆಯನ್ನು ಕಂಡ ಕೊಲಂಬಸ್ಸಿನಂತೆ, ಕತ್ತೆಯನ್ನು ಕಂಡ ಅಗಸನಂತೆ, ಎಲುಬನ್ನು ಕಂಡ ನಾಯಿಯಂತೆ, ಅಧಿಕಾರವನ್ನು ಕಂಡ ನಮ್ಮವರಂತೆ ಹಿರಿಹಿರಿ ಹಿಗ್ಗಿದ. ಇಡೀ ಅವನ ಮುಖವೇ ಬಾಯಿ ಆಗಿದ್ದಿತು. ಆರಡಿ ಎತ್ತರ ಮೂರಡಿ ದಪ್ಪದ ಆ ಗಲ್ಲಿ ಮೀಸೆಯ ವಜೆಯಾಳು ನನ್ನ ಕಾಲಡಿಯಲ್ಲಿ ಕುಳಿತಾಗ ನನಗೇಕೋ ಬಹು ಕೆಡಕೆನಿಸಿತು.

" ಏನಯ್ಯಾ ಬೇಕು ನಿನಗೆ ?" ಎಂದು ಕೇಳಿದೆ.

" ಪೋಲೀಸ ಇನ್ಸ್‌ಪೆಕ್ಟರ ಪಾರ್ಟಿ ಸ್ವಾಮಿ ನನ್ನದು; ನಿಮ್ಮ ಬೂಟ ಕಾಲಚೀಲ ಬೇಕು " ಎಂದವನೇ ಲೇಸುಗಳನ್ನು ಸಹ ಬಿಚ್ಚದಲೇ ಬೂಟನ್ನು ಎಳೆಯಲು ಸುರುಮಾಡಿದ. ರಾಜ್ಯವು ಯಾವದಾದರೂ, ಪೋಲೀಸ ಜುಲಂ ತಪ್ಪಲಿಲ್ಲ! ಕಾಲು ಮುರಿದೀತೆಂಬ ಭಯದಿಂದ ನಾನೇ ಬೂಟು ಕಾಲುಚೀಲಗಳನ್ನು ಬಿಚ್ಚಿ ಆ ಪೋಲೀಸ ಇನ್ಸ್‌ಪೆಕ್ಟರನಿಗೆ ಕೊಟ್ಟೆ

ಶ್ರೀರಾಮನ ಪಾದುಕೆಗಳನ್ನು ಪಡೆದ ಭರತನಂತೆ ಆನಂದಸಾಗರದಲ್ಲಿ ಮುಣುಮುಣಿಗಿ ತೇಲಿದನು, ನನ್ನ ಬೂಟುಹೊತ್ತ ಆ ಪೀಸಿಪಾರಿ.

ಉದ್ದಕ್ರಾಪಿನ ಹುಡುಗನೊಬ್ಬನು ನನ್ನ ಕಡೆ ಬರಹತ್ತಿದ. ಏನಪ್ಪಾ ಬಂದಿ ಎಂದು ಮಾತನಾಡಿಸುವ ಮುನ್ನೆಯೇ ನನ್ನ ಕನ್ನಡಕಕ್ಕೆ ಕೈಹಾಕಿ 'ಕೊಂಚ ಕೊಡಿ ಸಾರ್, ನಾನು ಡಾಕ್ಟರ್ ಪಾರ್ಟು ಮಾಡುತ್ತೇನೆ' ಎಂದ. ನನ್ನ ಕಣ್ಣನ್ನೇ ಅವನಿಗೆ ಕೊಟ್ಟು ನಾನು ನಾಟಕ ನೋಡುವದೆಂತು. ಆದರೆ ಒಂದೇ ಧೈರ್ಯ. ಬಿದಿಯಲ್ಲಿಯೇ ಇದ್ದ ನನ್ನ ಅವಳು ಹೇಳಬಹುದಲ್ಲ ನನಗೆ— ವೇಷ ಬಂದಿತ್ತು, ವೇಷ ಹೋಯಿತು, ಪಡದೆ ಬಿದ್ದಿತು, ಪಡದೆ ಎದ್ದಿತು ಎಂಬುದನ್ನು. ನಾನಿನ್ನೂ ಯೋಚಿಸುತ್ತಿರುವಾಗಲೇ ನನ್ನ ಕನ್ನಡಕಗಳು ಆ ಡಾಕ್ಟರನ ಕೈಸೇರಿದವು. 'ಕೊಂಚ ಕೊಡಿ ಸಾರ್' ಎರಡನೇ ಬೆಲ್ಲಾಯಿತು. ಯಜಮಾನರು ಬೈಯುತ್ತಾರೆ' ಎಂದವನೇ ಸಾಗಿಯೇ ಬಿಟ್ಟ. ಮುಂದೆನಾಯಿತೋ ದೇವರೇ ಬಲ್ಲ, ನನಗಂತೂ ಕಾಣಿಲ್ಲ. ತುಸು ಹೊತ್ತಿನಲ್ಲಿಯೇ ಮೂರನೆಯ ಗಂಟೆಯೂ ಆಯಿತು. ಸದ್ಯ ಕಂಪನಿಯ ಕಲಾಕೋವಿದರು ನನ್ನ ಮೂಗು ಕಿವಿಗಳಿಗೂ ಗಂಟು ಬೀಳಲಿಲ್ಲ.

ಸೂತ್ರಧಾರನು ಹಾಡುವಾಗ ನಾಲ್ಕಾಣೆ ವರ್ಗದಿಂದ ಕೂಗು ಕೇಳಬಂದಿತು. 'ಬಸವಂಣೆಪ್ಪಂದು ನೋಡಲೆ ಆ ಹಸರು ರುಮಾಲ' ಎಂದಾರೋ ಅಂದರು. ರಸಿಕ ಪ್ರೇಕ್ಷಕರು ತಂತಮ್ಮ ಬಟ್ಟೆ ಬರೆಗಳನ್ನು ಗುರುತಿಸಿ ಕೂಗಿ ಹೇಳಿದಂತೆಲ್ಲ ನನಗೆ ತಿಳಿಯುತ್ತಿದ್ದಿತು, ಹೊಸ ಹೊಸ ವೇಷಗಳು ಬಂದಿವೆಯೆಂದು. ನಾಟಕವು ಆರಂಭವಾದ ಅರ್ಧಗಂಟೆಯಲ್ಲಿಯೇ ಮನೆಗೆ ಹೋಗೋಣವೆಂದು ನನ್ನ ಅವಳು ಕಾಡಹತ್ತಿದಳು. ಆದರೆ ನಾನು ಹೊರಡುವದಾದರೂ ಹೇಗೆ— ಕಡ್ಡಿಪೆಟ್ಟಿಗೆ, ಟೈ, ಶಾಲು, ಕಾಲು, ಕಂಣು ಎಲ್ಲವೂ ನಟ ನಟೀ ವರ್ಗಕ್ಕೆ ಕೊಟ್ಟು ಪೂರ್ತಿ ಪರಾಧೀನನಾದ ಮೇಲೆ? ಚಳಿಯಲ್ಲಿ ನಡುಗುತ್ತ ಬೆಳ್ಳಂಬೆಳಗೂ ಕಂಣು ಮುಚ್ಚಿ ಕುಳಿತು ನಾಟಕವನ್ನು ಕೇಳಿದೆ.

ಕಡೆಯ ದೃಶ್ಯವಿರುವಾಗಲೆ ಕಂಪನಿಯ ಮಾಲಕರು ದೀರ್ಘ ಭಾಷಣವೊಂದನ್ನು ಮಾಡಿ ರಸಿಕ ಪ್ರೇಕ್ಷಕವೃಂದದ ಆಭಾರವನ್ನು ಮನ್ನಿಸಿ ನಾಳಿನ

**ನಾಟಕವು** ಪೌರಾಣಿಕ-ರಾಮಾಂಜನೇಯ ಯುದ್ಧವೆಂದು ತಿಳಿಸಿ ಇಂದಿನಂತೆ ಎಲ್ಲರೂ ನಾಳೆಯೂ ಬರಬೇಕೆಂದು ವಿಜ್ಞಾಪಿಸಿಗೊಂಡರು.

ಮನೆ ಮುಟ್ಟಿದ ಕೂಡಲೆ ಸುಪ್ರಸಿದ್ಧ ಸರಸ್ವತಿ ಪ್ರಾಸಾದಿಕ ನಾಟಕ ಕಂಪನಿಗೆ ಕಾಂಪ್ಲಿಮೆಂಟರಿ ಪಾಸನ್ನು ಹಿಂದೆ ಕಳುಹಿ ಕೆಳಗಿನಂತೊಂದು ಪತ್ರವನ್ನು ಬರೆದೆ.

" ಆಂಜನೇಯನ ಬಾಲಕ್ಕೆ ಸೀರೆ ಬೇಕಾಗಹುದು. ನನ್ನ ಅವಳಿಗೆ ಇರುವದು ಒಂದೇ ಸೀರೆ. ಕಾರಣ ಕ್ಷಮಿಸಿ, ನಾನು ನಿಮ್ಮ ಮುಂದಿನ ನಾಟಕಕ್ಕೆ ಬರಲಾರೆ. ನನ್ನ ಕಡ್ಡಿಪೆಟ್ಟಿಗೆ, ಕನ್ನಡಕ, ಶಾಲು, ಟೈ, ಬೂಟು ಮುಂತಾದ ಸೆಕೆಂಡ್ ಹ್ಯಾಂಡ್ ಡ್ರೆಸ್ಸುಗಳನ್ನು ನಿಮ್ಮ ಕಲಾಕೋವಿದರಿಗೆ ಬಹುಮಾನವಾಗಿ ಕೊಟ್ಟಿದ್ದೇನೆ. "

ಪತ್ರವನ್ನೊಯಿದ ಆಳು ಕೂಡಲೆ ಮರಳಿ ಬಂದ. ಏನೋ ಬಂದಿ ಎಂದು ಕೇಳಿದೆ. ನಾಟಕ ಕಂಪನಿ ಆಗಲೆ ಮುಂದಿನ ಊರಿಗೆ ಹೋಯಿತಂತೆ ಸ್ವಾಮಿ ಎಂದ.

# ಏಕತಂತ್ರ ಜಗತ್ತು

ಆಂಧ್ರ ತಮಿಳರ ಕುರುಕ್ಷೇತ್ರವಾದ ಮದರಾಸಿನಲ್ಲಿ ಇಬ್ಬರು ಕನ್ನಡಿಗರು ಸೇರಿದರೆ ಅದೊಂದು ಚಿಕ್ಕ ಹಬ್ಬ. ಕನ್ನಾಡಿನಲ್ಲಿ ಎಷ್ಟು ಬೇಡಾದ ವ್ಯಕ್ತಿಯಾದರೂ ಹೊರಗೆ ದೊರೆತರೆ ಕೊಂಚ ಹಿಗ್ಗು, ಹಿತ ಚಿಂತನೆ.

ಆದಿತ್ಯವಾರ ಸಾಯಂಕಾಲ ಮಳೆ ಬಾರದಿದ್ದರೆ, ಮದ್ರಾಸಿನ ಬೀಚಿಗೆ ದೇವತೆಗಳೂ ಬಂದಾರು— ಬಸ್ಸಿಗೆ ಟಿಕೇಟು ಮಾತ್ರ ದೊರೆಯಬೇಕು, ಅಷ್ಟೆ. ಒತ್ತಾಯದ ಸಂಗೀತವನ್ನು ತಪ್ಪಿಸಿಕೊಂಡು ಹಸಿ ಉಸುಗಿನ ಬಳಿ ತಿರುಗುವಾಗ ಅಕಸ್ಮಾತ್ ಕಣ್ಣಿಗೆ ಬಿದ್ದರು, ಅಲ್ಪ ಪರಿಚಯದ ಗೆಳೆಯರೊಬ್ಬರು. ಅವರೂ ಕನ್ನಡಿಗರೇ ! ಇನ್ನೂ ಹೆಚ್ಚು ಅಚ್ಚ ಕನ್ನಡಿಗರು. ಅವರ ಮನೆ ಮಾತು— ಅಲ್ಲ, ರೂಮು ಮಾತು— ಕನ್ನಡವೇ. ಅವರ ಊರು ಸಾಕ್ಷಾತ್........ರು. ಮೈ ಚಳಿ ಬಿಡುವಂತೆ ಕೈ ಕುಲುಕಿದ್ದಾಯಿತು. ಹರಟೆಗೆ ಕುಳಿತೆವು.

"ಈ ಪ್ರಾಂತದ ಭೂತ ಕನ್ನಡಿಗರಿಗೂ ಬಡಕೊಂಡಿದೆಯಲ್ಲ ?" ಎಂದು ಖಡ್ಗ ಪ್ರಹಾರದಿಂದಲೇ ಸಂಭಾಷಣೆ ಸುರುಮಾಡಿ ಬಿಟ್ಟರು ನನ್ನ ಗೆಳೆಯರು. ಇರಬಹುದು ಪಾಪ, ದೊಡ್ಡ ಮುಖಂಡರಾಗುವ ಆಶೆ! ನಾನೂ ಜನಮೇಜಯರಾಯನಂತೆ ಹೂಗುಟ್ಟುತ್ತ ಕುಳಿತಿದ್ದರೆ ಸಂಭಾಷಣೆ ಹೋಗಿ ಭಾಷಣವಾದೀತೆಂಬ ಭಯದಿಂದ ಕೊಂಚ ಅಡ್ಡಗಾಲು ಕೊಟ್ಟೆ.

"ಭಾಷಾವಾರ ಪ್ರಾಂತವನ್ನು ಬೇಡುವದು ಅನುಚಿತವೆಂದೇ ನಿಮ್ಮ ಅಭಿಪ್ರಾಯ ?"

"ಬರಿ ಅನುಚಿತವಲ್ಲ; ಶುದ್ಧ ಮೂರ್ಖತನ" ಎಂದು ಒತ್ತಿಹೇಳಿ ಉಸುಗಿನಲ್ಲಿ ಮೂರಂಗುಳ ಕುಸಿಬಿದ್ದು ಮುಂದೆ ಸಾಗಿದರು. "ಪ್ರಾಂತೀಯತೆ, ಜಾತೀಯತೆ ಸಮಾಜದ ಉನ್ನತಿಗೆ ಕೊಡಲಿಯಂತೆ"

"ಈ ಎರಡೂ 'ಯತೆ'ಗಳನ್ನು ಒಂದೇ ಉಸಿರಿನಲ್ಲಿ ಹೇಳಬೇಡಿ. ನಾವು ಇಂದು ಕೇಳುತ್ತಿರುವುದು ಬ್ರಹ್ಮಸ್ಥಾನ, ಲಿಂಗಸ್ಥಾನ, ಕುರುಬಸ್ಥಾನ,

ಬೇಡಸ್ಥಾನಗಳನ್ನಲ್ಲ. ಜಾತೀಯತೆಗೂ ಪ್ರಾಂತೀಯತೆಗೂ, ನನಗೂ ನಿಮಗೂ ಇದ್ದಷ್ಟು ಭೇದವಿದೆ........" ಮಧ್ಯದಲ್ಲಿ ಮಾತು ತುಂಡರಿಸಿದರು.

" ತಲೆ ಇವರ ತಲೆ. ಪ್ರಾಂತವಂತೆ ಪ್ರಾಂತ. ಜಗತ್ತಿನ ಕಡೆಗೆ ದೃಷ್ಟಿ ಇಲ್ಲ ನೋಡಿ ನಮ್ಮ ಜನಕ್ಕೆ. ಆಗಸ್ಟ ಹದಿನೈದು ಬಂದರೇನು ಮೂವತ್ತೈದು ಬಂದರೇನು ? ಇವರ ಹಣೆಯಬರಹವೇ ಇಷ್ಟು "

"ಮುಂಬಯಿ ಪ್ರಾಂತ, ಮದರಾಸ ಪ್ರಾಂತ ಎಂಬ ಪ್ರಾಂತಗಳಿಲ್ಲವೇ ಈಗ" ಎಂದು ಕೇಳಿದೆ.

" ಇವೆಯಲ್ಲ, ಸಾಲದೇ ಇದು ?"

" ಯಾವ ತಳಹದಿಯ ಮೇಲೆ ಸ್ವಾಮಿ, ಈ ಪ್ರಾಂತಗಳ ನಿರ್ಮಾಣ ವಾದದ್ದು ? ಹಿಂದೆ ಬಿದ್ದದ್ದು ಹಿತ್ತಲು, ಮುಂದೆ ಬಿದ್ದದ್ದು ಅಂಗಳ ಎಂದು ಮಂದಿಮನೆಯನ್ನು ಉಪಯೋಗಿಸಿ ಹೋದ ಈಸ್ಟ ಇಂಡಿಯಾ ಕಂಪನಿಯ ಬಿಳಿಸೆಟ್ಟರು ಮಾಡಿದುದೇ ನಿಮಗೆ ವೇದವೇ ? ಪ್ರಾಂತಗಳಂತೂ ಬೇಕೇ ಬೇಕು. ಆಡಳಿತೆ ಅನುಕೂಲಕ್ಕಾಗಿ, ಅವನ್ನು ಕಟ್ಟುವಾಗ ಅವಶ್ಯವಾಗಿ ನೋಡ ಬೇಕಾದುದು ಆಯಾಜನರ ಭಾಷೆ, ಸಂಸ್ಕೃತಿ, ಚರಿತ್ರೆ ಅಲ್ಲವೇ ? ಇದಕ್ಕೇಕೆ ನಿಮ್ಮ ಆಕ್ಷೇಪಣೆಯೋ ತಿಳಿಯಲಿಲ್ಲವಲ್ಲ ?" ಎಂದು ಗೆಳೆಯರ ಮುಖ ನೋಡಿದೆ.

"ಟ್ರೂಮನ್ನರ ಏಕತಂತ್ರ ಜಗತ್ತಿನ ಬಗ್ಗೆ ನಿಮ್ಮ ಅಭಿಪ್ರಾಯವೇನು?" ಎಂದು ಕೇಳಿ ಮಾತಿನ ಸರಣಿಯನ್ನು ಅತ್ತ ತಿರುವಿದರು.

" ಟ್ರೂಮನ್ನರದೇ ಆಗಬೇಕೆಂದಲ್ಲ; ಯಾರದಾದರೂ ಸರಿಯೇ. ಏಕ ತಂತ್ರ ಜಗತ್ತು ಅತ್ಯುತ್ತಮವಾದದ್ದು."

" ಸ್ವಾಮೀ, ಏಕತಂತ್ರ ಜಗತ್ತು, ಜಗತ್ತಿನ ಪೋಲೀಸು, ಜಗತ್ತಿನ ಕೋರ್ಟ ಎಂದು ಕೇಳುವ ಕಾಲದಲ್ಲಿ, ನೀವು ಆಂಧ್ರ, ತಮಿಳು, ಕೇರಳ, ಕನ್ನಡ—ಆದರಲ್ಲಿಯೂ ಮೈ ಕನ್ನಡ, ಹೈ ಕನ್ನಡ—ಎಂದು ಕಾಡುತ್ತೀರಲ್ಲ ಇದು ಪ್ರಾಂತೀಯತೆಯ ಭೂತವಲ್ಲದೆ ಮತ್ತೇನು ಹೇಳಿ. ಇಡೀ ಜಗತ್ತಿನ ಮನುಷ್ಯರೆಲ್ಲರೂ ಒಂದು ಎಂಬ ಕಲ್ಪನೆ ಪ್ರತಿಯೊಬ್ಬನ ಮನಸ್ಸಿನಲ್ಲಿಯೂ ಮನೆ ಮಾಡಬೇಕು. ನಾವು ಮೈಸೂರು ಕನ್ನಡಿಗರು, ನೀವು ಬಳ್ಳಾರಿ ಕನ್ನಡಿಗರು, ಅವರು ಹೈದರಾಬಾದ ಕನ್ನಡಿಗರು, ಇನ್ನೊಬ್ಬರು ಧಾರವಾಡದ

ಕನ್ನಡಿಗರು ಎಂಬ ಸಂಕುಚಿತ ಭಾವ ನಮ್ಮ ಜನರಲ್ಲಿ ತುಂಬಿ ಹೋಗಿದೆ.... ....ಇತ್ಯಾದಿ—ಇತ್ಯಾದಿ. "

"ಗೋಕುಲಾಷ್ಟಮಿಗೂ ಇಮಾಂ ಸಾಬಿಗೂ ತಳಕಿ ಹಾಕಿದಿರಿ ತಾವು. ಇದೆಲ್ಲ ಹೇಳುವ ಬದಲು ಒಂದೇ ಮಾತಿನಲ್ಲಿ ಮುಗಿಸಬಹುದಿತ್ತು" ಎಂದೆ.

" ಏನೆಂದು ?"

" ಆನೆಯು ಎಮ್ಮೆಯಕಿಂತಲೂ ದೊಡ್ಡದಿರುವದರಿಂದ ಪ್ರಾಂತೀಯತೆ ತಪ್ಪು. "

" ಅಷ್ಟು ಮೂರ್ಖನೇ ನಾನು ? ಹಾಳಾಗಲಿ ಬಿಡಿ, ಪ್ರಾಂತಗಳು ಹೊಳೆಬೀಳಲಿ. ನೀವು ಮನೆ ಹುಡುಕುತ್ತಿದ್ದರಲ್ಲ, ದೊರೆಯಿತೇ ? " ಎಂದು ಹಿತಚಿಂತನೆ ಮಾಡಿದರು.

" ಎಲ್ಲಿದೆ ಸ್ವಾಮಿ ಮನೆ ? ಸದ್ಯ ಒಬ್ಬ ಗೆಳೆಯರ ಮನೆಯಲ್ಲಿ ಧ್ವಜ ಹಾಕಿದ್ದೇನೆ. ಅವರಿಗೆ 'ನೈಟ್ ಡ್ಯೂಟಿ' ಇರುವದರಿಂದ ಪಾಳಿಯ ಮೇಲೆ ಇಬ್ಬರಿಗೂ ಮಲಗಲು ಸ್ಥಳ ದೊರೆತಿದೆ."

" ನಮ್ಮ ಮನೆಯಲ್ಲಿ ಒಂದು ಭಾಗವಿದೆ, ಬಾಡಿಗೆಗೆ.... .... " ಮೂಗೆಳೆದರು.

" ನನಗೆ ಕೊಡಿ ಸ್ವಾಮಿ ಹೆಂಡತಿಯನ್ನೂ ಕರೆಸುತ್ತೇನೆ. ನಮ್ಮ ಪುನರ್ಮಿಲನದ ಪುಣ್ಯ ಬರುತ್ತೆ ನಿಮಗೆ" ಎಂದು ಕೊಂಚ 'ತಾಜಾ' ಮಾಡಿದೆ.

" ಕೊಡಬಹುದಾಗಿತ್ತು. ಅದಕ್ಕೇನು ಪಾಪ, ನೀವೂ ಕನ್ನಡಿಗರು ಅಂತೀರಾಸ " ಎಂದು ಅನುಮಾನಿಸುತ್ತ ಮಾತು ಜಗ್ಗಿದರು.

" ನಿಮ್ಮಾಣೆ ಕನ್ನಡಿಗರು ಸ್ವಾಮಿ ನಾವು, ನಮ್ಮ ಜಿಲ್ಲೆಯ ಆರು ತಾಲೂಕುಗಳನ್ನುಕೇಳ್ಕರರೇ ಕೊಟ್ಟರಲ್ಲ ಕರ್ನಾಟಕಕ್ಕೆ ? ಆ ಆರು ತಾಲೂಕುಗಳಲ್ಲಿ ನನ್ನದೊಂದು."

" ಉಳಿದವು ?"

"ಉಳಿದ ಮೂರು ಕುಸ್ತಿಗೆ ಬಿಟ್ಟಿದ್ದಾರೆ ಅನ್ನಿ. ತಮ್ಮ ಊರಾವುದು?" ಕುತೂಹಲದಿಂದ ಕೇಳಿದೆ.

" ನಮ್ಮದು........ರು. ಮನೆ ನಿಮಗೆ ಕೊಡೋಕೇನು ಆಕ್ಷೇಪವಿಲ್ಲ ಬಿಡಿ. ಕನ್ನಡಿಗರಿಗೆ ಮಾತ್ರವೇ ನಾವು ಕೊಡೋದು. ಆದರೆ........ರಿನ ಕನ್ನಡಿಗರಿಗೇ ಕೊಡೋದು. ನಿಮ್ಮದು ಬಳ್ಳಾರಿ ಅಂತೀರಲ್ಲ ?"

"ನನ್ನ ದುರ್ದೈವ ಸ್ವಾಮಿ, ನಿಮ್ಮೂರಿನಲ್ಲಿ ನಾನು ಹುಟ್ಟದೆ ಇದ್ದದ್ದು."

ಇದ್ದಕ್ಕಿದ್ದಂತೆ ಮಳೆ ಸುರಿಯಿತು.

" ಬರ್ತೀನೆ " ಎಂದು ಆಡಿದಂತೆ ಮಾಡದೆ ಹೊರಟೇ ಬಿಟ್ಟರು.

" ಟ್ರೂಮನ್ನರ ಏಕತಂತ್ರ ಜಗತ್ತಿನ ಬಗ್ಗೆ ಇನ್ನೂ ಕೊಂಚ ಮಾತ ನಾಡಿದ್ದರೆ ಚೆನ್ನಾಗಿತ್ತು, ನೀವು " ಎಂದು ಕೂಗಿದೆ.

' ಕ್ಯೂ 'ನಲ್ಲಿ ನಿಂತಿದ್ದ ಹೆಂಗಳೆಯರನ್ನು ಹಿಂದೆ ದೂಡಿ ಓಡಿ ಬಸ್ಸಿನಲ್ಲಿ ಕುಳಿತು ಉತ್ತರವಿತ್ತರು:

" ಹೋಗಬೇಕು, ಸಂಕುಚಿತ ಪ್ರಾಂತೀಯತೆ ನಮ್ಮ ಜನರಿಗೆ........" ದೇವರ ದಯದಿಂದ ಕಂಡಕ್ಟರನು 'ರೈಟ್' ಕೊಟ್ಟ. ಮಳೆಯೂ ನಿಂತಿತು.

# ವಿಶೇಷಸಂಚಿಕೆ

'ಮುಂದಿನ ತಿಂಗಳಲ್ಲಿ ಪ್ರಕಟವಾಗಲಿರುವ ನಮ್ಮ ಪತ್ರಿಕೆಯ ವಿಶೇಷ ಸಂಚಿಕೆಗೆ ಒಂದು ಲೇಖವನ್ನು ಬರೆದು ಕಳಿಸಿರಿ ' ಎಂಬದೊಂದು ಮೇಹರ್ಬಾನಿ ಪತ್ರವು ಒಬ್ಬಾನೊಬ್ಬ ಮಾನ್ಯ ಸಂಪಾದಕರಿಂದ ಬಂದಿತು; ಅತ್ಯಾನಂದವಾಯಿತು ತಿಂಮನಿಗೆ, ಈ ಮಹಾಶಯರ ಪತ್ರಿಕೆಯು ಮುಂದಿನ ತಿಂಗಳವರೆಗಂತೂ ನಡೆಯುವದಲ್ಲಾ ಎಂದು. ಇವರ ಮಾಮೂಲು ಸಂಚಿಕೆ ಹೊರಡುವದೇ ಒಂದು ವಿಶೇಷ; ಇವರಿಗೆ ವಿಶೇಷ ಸಂಚಿಕೆಯ ಹುಚ್ಚು ಹಿಡಿದಿರುವದು ಇನ್ನೊಂದು ವಿಶೇಷ ! ನಮ್ಮ ಸಂಪಾದಕ ಮಹಾಶಯರಿಗೆ ಪರಿಚಯವಿಲ್ಲದ ಬರೆಹಗಾರರೇ ಇಲ್ಲ ಜಗತ್ತಿನಲ್ಲಿ; ಬರೀ ಅಷ್ಟೇ ಅಲ್ಲ, ಯಾರಾರು ಯಾವಾವ ವಿಷಯಗಳ ಮೇಲೆ ಎಷ್ಟೆಷ್ಟಿದ್ದ ಬರೆಯತಕ್ಕದ್ದು ಎಂಬದು ಕೂಡ ಅವರಿಗೆ ಸಂಪೂರ್ಣವಾಗಿ ಗೊತ್ತಿದ್ದಿತು. ಕವಿವರ್ಯರಾದ ಬೇಂದ್ರೆಯವರು 'ಜಪಾನ ಹಡಗು ಪಡೆ'ಯ ಮೇಲೆ, ಏಕೀಕರಣದ ಜಗದ್ಗುರು ಗಳು 'ನಟಿ ನರ್ಗಿಸ'ಳ ಮೇಲೆ (!), ಕಾವ್ಯೇಡ ಕುಳಕುಂದರು 'ದೈವಭಕ್ತಿ ಗಿಂತ ಬೇರಿಲ್ಲ ' ಎಂಬ ವಿಷಯದ ಮೇಲೆ, ಉಡುಪಿಯ ಬಾಲ ಸನ್ಯಾಸಿ ಗಳಾದ ಜಿತಕಾಮೇಂದ್ರರು 'ದಾಂಪತ್ಯ ಜೀವನ 'ದ ಬಗ್ಗೆ, ಪೋಲೀಸ ಇನ್ಸ್‌ಪೆಕ್ಟರ ಫಕ್ರೂಸಾಹೇಬರು 'ಪ್ರಾಣಿದಯೆ'ಯ ಮೇಲೆ, ಸಂಗೀತಶಾಸ್ತ್ರ ಪಾರಂಗತರೊಬ್ಬರು 'ಹೋಲಿಗೆಕಲೆ'ಯ ಬಗ್ಗೆ, ತೆಲುಗು ಎಂದರೆ ಅದೊಂದು ಔಷಧಿಯ ಹೆಸರೇ ಎಂಬೊಬ್ಬ ಖಟ್ಟಾ ಕನ್ನಡ ಕಡುಗಲಿಗಳೊಬ್ಬರು 'ಆಂಧ್ರ ಸಾಹಿತ್ಯದ ಹಿರಿಮೆ'ಯ ಬಗ್ಗೆ, ಕುಶಲ ಕವಿಗಳಾದ ಕಣವಿ ಅವರು 'ಕೋಳಿ ಮೊಟ್ಟೆಯಲ್ಲಿಯ ವ್ಹಿಟಮಿನ್ನುಗಳು ' ಎಂಬ ಕಾವ್ಯಮಯವಾದ ವಿಚಾರ ವನ್ನು ಕುರಿತು, ಮೂರು ರೈಲುಗಳು ಸೇರುವ ಗುಂತಕಲ್ಲನ್ನು ಸಹ ನೋಡದ ಗೌಡರು 'ಅಮೇರಿಕೆಯ ಮೂಲಶಿಕ್ಷಣದ' ಮೇಲೆ, ಬ್ರಹ್ಮಚಾರಿಗಳೊಬ್ಬರು ' ಹೆರಿಗೆ ಆಸ್ಪತ್ರೆ ಏಕೆ ಬೇಕು ?' ಎಂಬ ವಿಷಯವನ್ನು ಕುರಿತು, ಭಾವಜೀವಿ

( ಭಾವನ ಮೇಲೆಯೇ ಜೀವನವನ್ನು ಸಾಗಿಸುವ ) ಗಳಾದ ಮಂತ್ರಿಗಳ ಭಾವಮೈದುನರೊಬ್ಬರು ' ನಿರುದ್ಯೋಗಿಗಳ ಕಷ್ಟಸಂಕಷ್ಟಗಳು ' ಎಂಬ ಸಮಸ್ಯೆಯ ಮೇಲೆ, ಮಾನ್ಯ ಅರಣ್ಯ ಮಂತ್ರಿಗಳು 'ಕಸೂತಿ'ಯನ್ನು ಕುರಿತು, ಅಖಿಲ ಭಾರತದ ಮಹಿಳಾ ಪರಿಷತ್ತಿನ ಕಾರ್ಯದರ್ಶಿಣಿಯವರು 'ಕಂಬಳಿ ಕೈಗಾರಿಗೆ' ಯ ಮೇಲೆ, ಸುಪ್ರಸಿದ್ಧ ನಗೆಗಾರನೆಂದು ತಿಳಿದುಕೊಂಡಿದ್ದ ತಿಂಮನು 'ಅಳುವಿ'ನ ಬಗ್ಗೆ, ಹೀಗೆಯೇ ಶ್ರೀಯುತ ಇತ್ಯಾದಿ ಇತ್ಯಾದಿಗಳು ಇತ್ಯಾದಿ ಇತ್ಯಾದಿ ವಿಷಯಗಳನ್ನು ಕುರಿತು ಬರೆದುಕೊಡಬೇಕೆಂದು ನಮ್ಮ ಸಂಪಾದಕರ ಕೋರಿಕೆಯ ರೂಪದ ಅಜ್ಞೆ ಅಥವಾ ಬೇರಿನ್ನಾವಾದರೂ ವಿಷಯದ ಮೇಲೆ ಬರೆಯಿರಿ ಎಂಬ ವಿ. ಸು. ಒಂದು ಇದ್ದಿತು, ತಿಂಮನ ಸುದೈವದಿಂದ. ಹಾಗಾದರೆ ' ವಿಶೇಷ ಸಂಚಿಕೆ ' ಎಂಬ ವಿಶೇಷ ವಿಷಯವೇ ಇರಲಿ!

ವಿಶೇಷ ಸಂಚಿಕೆಗಳು ಯಾವಾವಾಗ ಹೊರಡಬೇಕ–ಅಲ್ಲ–ಹೊರಡುತ್ತವೆ ಎಂಬವನ್ನು ಲೆಕ್ಕ ಹಾಕಹತ್ತಿದ ತಿಂಮ. ನಲವತ್ತೇಳರಿಂದ ಒಂದೇ ಸಮನೆ ಗಂಟು ಬಿದ್ದಿರುವದು ಅಗಷ್ಟ ಹದಿನೈದರ ಸ್ವಾತಂತ್ರ್ಯ ಸಂಚಿಕೆ. ದಸರೆ ಹುಟ್ಟುವ ಮುನ್ನವೆ ಹುಟ್ಟಿರುವದು ಮೈಸೂರಿಗರ 'ದಸರಾ ಸಂಚಿಕೆ;' ಮುಂಬಯಿ ಕನ್ನಡಿಗರ ಮಾಮೂಲು ' ದೀಪಾವಳಿ ಸಂಚಿಕೆ '; ಕಳ್ಳಪೇಟೆಯಲ್ಲಿ ಕಾಗದವನ್ನುಕೊಂಡು ತಯಾರಿಸಿದ ' ಬಾಪೂಜಿ ಸಂಚಿಕೆ; ಊರಲ್ಲಿ ಯಾರಿಗ ದರೂ ಅರವತ್ತು ವರ್ಷಗಳಾದರೆ 'ಅರವತ್ತು ತುಂಬಿದವರ ಸಂಚಿಕೆ; ಐವತ್ತೊಂಬತ್ತೇ ಆದರೆ 'ಅರವತ್ತಕ್ಕೆ ಒಂದೇ ಕಡಿಮೆಯಾದವರ ಸಂಚಿಕೆ; ' ಪೋಷಕ ಪ್ರಧಾನಪೋಷಕ ವರ್ಗದ ಹಣವೆಂಬ ಬಾಲಸಂಜೀವಿನಿಯಿಂದ ಹಾಗೂ ಹೀಗೂ ಕಂಣಲ್ಲಿ ಜೀವಹಿಡಿದು ಪತ್ರಿಕೆಯು ಲಿವರ ಅದ ಮಗುವಿನಂತೆ ಒಂದು ವರ್ಷ ಬದುಕಿಬಿಟ್ಟರೆ ಅದರ ' ಪ್ರಥಮ ವಾರ್ಷಿಕ ಸಂಚಿಕೆ ' ಅದೆಂದೋ ಏಕೋ ಹೇಗೋ ಸತ್ತವರ ಶ್ರಾದ್ಧ ಇಂದಾದರೆ 'ಶ್ರಾದ್ಧ ಸಂಚಿಕೆ;' ಸಂಪಾದಕರಿಗೆ ಆಕಸ್ಮಿಕವಾಗಿ ಒಂದು ಮಗಳು ಆದರೆ ' ಮಗಳ ಸಂಚಿಕೆ; ' ಊರಲ್ಲಿ ಸಾಹಿತ್ಯ ಸಮ್ಮೇಲನವಾದರೆ 'ಸಮ್ಮೇಳನ ಸಂಚಿಕೆ,' ಎತ್ತಿನ ಜಾತ್ರೆಯಾದರೆ ' ವೃಷಭ ಸಂಚಿಕೆ, ' ಏನೂ ಇಲ್ಲದಿದ್ದರೆ 'ಏನೂ ಇಲ್ಲದ ಸಂಚಿಕೆ' ಹೀಗೆಯೇ ವಿಶೇಷ ಸಂಚಿಕೆಯನ್ನು ಹೊರಡಿಸಲು ಏನಾದರೂ ಒಂದು ವಿಶೇಷ ಹಂಚಿಕೆ.

“ ನಮ್ಮ ಹುಡುಗ ಒಂದು ಚಿಕ್ಕ ಕತೆಯನ್ನು ಬರೆದಿದ್ದಾನೆ. ಯಾವು ದಾದರೂ ಒಂದು ಪತ್ರಿಕೆಯಲ್ಲಿ ಪ್ರಕಟಿಸಿ ಪುಣ್ಯಕಟ್ಟಿಕೊಳ್ಳಿ ” ಎಂದೊಬ್ಬ ತಂದೆ ಬಹುವಾಗಿ ಕಾಡಿದರು ತಿಂಮ್ಮನನ್ನು.

“ ಎಷ್ಟು ಪುಟಗಳು ಇದೆ ?” ತಿಂಮ ಕೇಳಿದ.

“ ಅದೇನು ಕಾದಂಬರಿಯಷ್ಟು ದೊಡ್ಡದಿಲ್ಲ. ಚಿಕ್ಕ ಚಿಕ್ಕ ಕತೆ ಅದು. ಸುಮಾರು ಐವತ್ತು ಪುಟಗಳಿಗೆ ಮುಕ್ಕಬಹುದು. ”

“ ಆಗಲಿ ಬಿಡಿ, ಎಷ್ಟಾದರೇನು ? ಚಿಕ್ಕವನು ಬರೆದ ಮೇಲೆ ಚಿಕ್ಕ ಕತೆಯೇ ಅದು. ಒಂದೆರಡು ದಿನಗಳು ತಡೆಯಿರಿ. ವಿಶೇಷ ಸಂಚಿಕೆಗಳ ಸುಗ್ಗಿ ಬರಲಿ. ಎಲ್ಲ ಕಸಕ್ಕೂ ಸ್ವಾಗತ ಕೊಡುವ ಮುನಿಸಿಪಾಲ್ಟಿ ಅದು. ” ಎಂದನಂತೆ ತಿಂಮ.

ವಿಶೇಷ ಸಂಚಿಕೆಗಳಲ್ಲೂ ಪ್ರಕಟವಾಗಲಾರದಂತಹ ಲೇಖಗಳನ್ನು ಯಾರಾದರೂ ಬರೆಯುವವರಿದ್ದರೆ ಅವರು ಏಳು ಜನ್ಮಗಳನ್ನು ಏನೂ ಬರೆ ಯದೆ ಕಳೆಯತಕ್ಕದ್ದು. ಎಂಟನೆಯ ಜನ್ಮದಲ್ಲಿ ಅ ಆ ಗಳನ್ನು ಆರಂಭ ಮಾಡತಕ್ಕದ್ದು. ಮಳೆ ಬಂದು ಜನರು ಸೇರದೆ ಆಗದಿದ್ದ ಸಭೆಯಲ್ಲಿ ಆಗ ಬೇಕಾಗಿದ್ದ ಭಾಷಣವು ವಿಶೇಷ ಸಂಚಿಕೆಯಲ್ಲಿ ಬಾರದಿದ್ದರೆ ಮತ್ತೆಲ್ಲಿಂದ ಹೊರಬರಬೇಕು ? ಕೊಟ್ಟ ಅಳತೆಗೆ ಕತ್ತರಿಸಿ ತಕ್ಕಷ್ಟೆ ಮಿತಕಾವ್ಯ ಇರಿಸಿ ತಯಾರಿಸಿದ ಬಾನುಲಿ ಭಾಷಣಕ್ಕೆ ಜಗತ್ತಿನಲ್ಲಿ ಬೇರೆಲ್ಲಿ ಎಡೆ ಇದೆ ಹೇಳಿ ನೋಡೋಣ ? ಒಂದು ವೇಳೆ ವಿಶೇಷ ಸಂಚಿಕೆಗಳೇ ಹೊರಡದಿದ್ದರೆ ತಂದೆ ತಾಯಿಗಳು ಬಾಲಗೋಪಾಲರೆಂದೂ ಕಂದಸರಸ್ವತಿಗಳೆಂದೂ ಭ್ರಮಿಸಿದ ತಮ್ಮ ಮುದ್ದು ಮಕ್ಕಳ ಮೊದ್ದುಮುಖ ಬೇರೆಲ್ಲಿ ಬರಬೇಕು ? ಮಗಳು ಎತ್ತರ-ಜಿಗಿತದಲ್ಲಿ ಕೀರ್ತಿಪಡೆದುದು, ಅಜ್ಜಿಯು ಸಂಗೀತ ಸ್ಪರ್ಧೆ ಯಲ್ಲಿ ತೇರ್ಗಡೆಯಾದುದು, ಭಾವನು ಭರತ ನಾಟ್ಯದಲ್ಲಿ ಭಲೆ ಎನಿಸಿ ಕೊಂಡುದು, ಅಳಿಯನು 'ಅವಲಕ್ಕಿ ತಿನ್ನುವ ಜೂಜಿ' ನಲ್ಲಿ ಅಜೀರ್ಣವನ್ನು ಗಳಿಸಿದುದು, ಧರ್ಮಪತ್ನಿಯು ನಿದ್ರೆ ಸ್ಪರ್ಧೆಯಲ್ಲಿ ಇಡೀ ಕರ್ನಾಟಕವನ್ನೇ ಹಿಂದೆ ಹಾಕಿದುದು, ತಾಯಿಯು ಸೋಡಾಪುಡಿ ಇಲ್ಲದೆ ಒಂದುಬಾರಿ ಉಪ್ಪು ನೀರಿನಲ್ಲಿಯೇ ಬೇಳೆ ಬೇಯಿಸಿದುದು, ಚಿಕ್ಕ ಮಗಳು ರೇಡಿಯೋದ ಮುಂದೆ ( ರೇಡಿಯೋದಲ್ಲಿ ಅಲ್ಲ ) ಹಾಡಿದುದು, ಅಜ್ಜನು ಅಡಿಕೆಯನ್ನು

ಕಡಿದುದು, ಸ್ವತಃ ತಾನು ರೈಲ್ವೆ ಗೈಡನ್ನು ಭಾಷಾಂತರಿಸಿದುದು ಈ ಜಗತ್ಪ್ರಸಿದ್ಧ ನವ ಆಶ್ಚರ್ಯಕಾರಕಗಳು ಸಂಪೂರ್ಣವಾಗಿ ಬರಬೇಕಾದರೆ ವಿಶೇಷಸಂಚಿಕೆಯಲ್ಲದೆ ಬೇರೆಲ್ಲಿ ತಾನೆ ಬರಲು ಸಾಧ್ಯ ?

ತಿಂಮನಿಗೆ ಇನ್ನೊಂದು ಹೊಸಯೋಚನೆ ಹೊಳೆಯಿತು. ಯಾರ ಉದ್ಧಾರಕ್ಕಾಗಿ ಸ್ವಾಮಿ, ಈ ವಿಶೇಷ ಸಂಚಿಕೆ ? ಸಂಪಾದಕರ ಸಂಪಾದನೆಯಂತೂ ಕಂಡಂತೆಯೆ ಇದೆ. ಲೇಖಕರಿಗಾಗುವ ಲಾಭವು ಯಾರಿಗೆ ತಿಳಿಯದು? ಇನ್ನು ಓದುಗರಿಗಾಗುವ ಜ್ಞಾನೋದಯ! ಆ ಮಾತಿಗಂತೂ ಆಸ್ಪದವೇ ಇಲ್ಲ. ಧನ್ಯ ಏಜಂಟ, ಧನ್ಯ ಧನ್ಯ.

# ಕಂಟ್ರೋಲ ಕಲ್ಪವೃಕ್ಷ

ಮನೆ ಎಂದರೆ ಎಲ್ಲವೂ ಒಂದೇನೆ? ಸ್ಥೂಲವಾಗಿ ಅವನ್ನು ವಿಂಗಡಿಸಬೇಕೆಂದರೆ ಮನೆಗಳಲ್ಲಿ ಎರಡು ಜಾತಿಗಳಂತೂ ಇದ್ದೇ ಇವೆ. ಕಾಪುರವಿರಲು ಕಟ್ಟಿಸಿದ್ದೊಂದು, ಬಾಡಿಗೆ ಬರಲು ನಿಲ್ಲಿಸಿದ್ದಿನ್ನೊಂದು. ಈ ಎರಡನೆ ಜಾತಿಯ ಸಾಲ್ಮನೆಗಳಲ್ಲಿ ಬಾಳ್ವೆ ಮಾಡಿದ ಭೂಪರಲ್ಲಿ ನಾನೊಬ್ಬ. ಒಳಗೋಡೆಗಳು ( ಗೋಡೆಗೆಂಟು ಗೂಡುಗಳು ) ಅಟ್ಟಿಯ ಎರಡುಮನೆಗಳ ಮಧ್ಯೆ. ಕಡೆಯ ಮನೆಯಲ್ಲಿ ತಾತ ಕೆಮ್ಮಿದರೆ ಮೊದಲ ಮನೆಯ ಮಾಳಿಯಿಂದ ಮಣ್ಣು ಉದುರುವದು ನಿತ್ಯದ ಅನುಭವ. ಅಂತೂ ಇಂತೂ ನಿದ್ರೆ ಹಗಲೇ, ಕಚೇರಿಯಲ್ಲಿ ಕುರ್ಚಿಯ ಮೆಲಿಯೇ. ಬೆಳ್ಳಂ ಬೆಳಗೂ ಕೊಯ್ ಕೊಯ್ಯೆಂದು ಬಾಯಿ ಮುಚ್ಚದೆ ಮಗುವಿನ ಕೆಮ್ಮು. ಆದರೆ ಆ ಮಗು ಯಾರ ಮನೆಯದು ಎಂದು ಪತ್ತೆ ಹಚ್ಚುವದು ಹೇಗೆ? ಹೇಗಾದರೂ ಮಾಡಿ ಇದನ್ನು ಪತ್ತೆ ಮಾಡಲೇ ಬೇಕೆಂದು ಹದಿನೈದು ರಾತ್ರಿಗಳು ಹೊಂಚು ಹಾಕಿದ್ದಾಯಿತು. ರಾತ್ರಿಯೆಲ್ಲವೂ ಎದ್ದು ಸೆಂಟ್ರಿ ಮಾಡಿದ್ದಾಯಿತು. ಕಡೆಗೂ ತಿಳಿಯಲಿಲ್ಲ, ಆ ಮಗು ಯಾವ ಮನೆಯದೆಂದು. ಒಬ್ಬ ಸಿ. ಐ. ಡಿ. ಅಧಿಕಾರಿಯ ಸಹಾಯ ಕೋರಿದೆ. ಈ ಬಾಲಚೋರನನ್ನು ಹಿಡಿಯಲು, ಬಹು ನೂತನ ಪದ್ಧತಿಯ ಮೇರೆಗೆ ಕೇಸಿನ ತಪಾಸಣೆ ನಡೆಸಿದರು, ಈ ಜಾಣ ಅಧಿಕಾರಿಗಳು. ಪ್ರತಿ ಮನೆಯ ಬಾಗಲೆಂಬ ರಂಧ್ರಕ್ಕೊಂದು ಧ್ವನಿವಾಹಕ ಯಂತ್ರವನ್ನು ನಿಲ್ಲಿಸಿಬಿಟ್ಟರು. ಐದೇ ನಿಮಿಷದಲ್ಲಿಯೇ ಸಿಕ್ಕುಬಿಟ್ಟನಲ್ಲ! ಮುಗಿಲು ನಡುಗುವಂತೆ ಬಂದಿತು, "ಕೊಯ್ ಕೊಯ್." ಕಕ್ಕಾಬಿಕ್ಕಿ ಆಗಿ ನೋಡಿದೆವು. ಕೂಡಲೆ ಓಡಿದೆವು ಆ ದಿಕ್ಕಿಗೆ ಹಿಡಿಯಿರಿ ಹಿಡಿಯಿರಿ ಎಂದು ಕೂಗುತ್ತ. ಆ ಮಗುವಿನ ತಂದೆ ತಾಯಿಯನ್ನು ಮನಸಾರೆ ಬೈದು ಮನೆ ಬಿಡಿಸಲೇಬೇಕೆಂದು ಮನದಲ್ಲಿಯೇ ನಿರ್ಧರಿಸಿದೆ. "ತೆಗೆಯಿರಿ ಬಾಗಿಲು" ಎಂದು ಆ ಮನೆಮುಂದೆಯೇ ಹೋಗಿ ನಿಂತೆವು. ಬಾಗಿಲು ತೆಗೆಯಿತು ನನ್ನದೇ ಮನೆ! ತೊಟ್ಟಿಲಲ್ಲಿ ಮಲಗಿದ್ದಾನೆ

ಚಿರಂಜೀವ, ಬಾಯಿ ಮುಚ್ಚದೆ ಕೊಯ್ ಕೊಯ್ ಮಾತ್ರ ಜಪಿಸುತ್ತ ಮಗುವನ್ನು ಕರೆದುಕೊಂಡು ಡಾಕ್ಟರ ಮಳಿಗೆಯ ಮುಂದೆ ಬೆಳಿಗ್ಗೆ ಹಾಜರಾದೆ. ಎರಡೇ ತಾಸುಗಳಲ್ಲಿ ಡಾಕ್ಟರ ಮನುಷ್ಯ ಬಂದು ಕದತೆರೆದು ಕಸ ಬಳಿದು ನೀರು ಚೆಲ್ಲಿ ಕ್ಯಾಲೆಂಡರು ತಿರುವಿ ಮಾಯವಾದ. ತೊಡೆಯ ಮೇಲೆ ಮಗುವನ್ನು ಮಲಗಿಸಿಕೊಂಡು ಬೆಂಚಿಯ ಮೇಲೆ ಕುಳಿತು ಗೋಡೆಗೆ ಆತು ಗೊರಕೆಹೊಡೆದೆ. ಕನಸೂ ಬಿದ್ದಿತು. ಡಾಕ್ಟರು ಔಷಧಿ ಕೊಟ್ಟಂತೆಯೂ ಮಗುವಿನ ಕೆಮ್ಮು ಗುಣವಾದಂತೆಯೂ ತೋರಿತು. ಕನಸಿನಲ್ಲಿಯೇ ಹುಸಿ ನಗು, ಅಷ್ಟರಲ್ಲಿಯೇ ಸುರುವಾಯಿತು. ಕೊಯ್ ಕೊಯ್. ಬೆಚ್ಚಿಬಿದ್ದು ಕಣ್ಣು ತೆರೆದು ಡಾಕ್ಟರು ಪ್ರತ್ಯಕ್ಷವಾದರು. ನಾನು ಕಣ್ಣು ತಿಕ್ಕಿ ಆ ಊ ಮಾಡುವ ಮುನ್ನೆಯೇ ಅಪ್ಪಣೆ ದಯಪಾಲಿಸಿದರು.

" ಈ ಕೆಮ್ಮಿಗೆ ನಮ್ಮಲ್ಲಿ ಔಷಧಿ ಇಲ್ಲವಯ್ಯಾ. ಇದೂ ಎಪ್ಪತ್ತಿನ ಕೆಮ್ಮು ಬೇರೆ ಯಾರಾದರೂ ಹಳೇ ವೈದ್ಯರ ಬಳಿ ಹೋಗು" ಎಂದರು.

ಬಹಳ ಸಂತೋಷವಾಯಿತು, ಡಾಕ್ಟರರೂ ಸಹ ಸತ್ಯವನ್ನೇ ನುಡಿದರಲ್ಲಾ ಎಂದು. ವೈದ್ಯರ ಮನೆಯ ಹಾದಿ ಹಿಡಿದೆ. ಸದ್ಯ ನನ್ನ ಪುಣ್ಯ, ವೈದ್ಯರು ಮನೆಯಲ್ಲಿಯೇ ಇದ್ದರು. ಆದರೇನು ಪ್ರಯೋಜನ ? ಕೋತಿಯನ್ನು ಕಳೆದುಕೊಂಡ ಸಾಬಿಯಂತಿದ್ದರು . ಏನಾಗಿದೆ ಎಂದು ಅವರ ಹೆಂಡತಿಯನ್ನು ಕೇಳಿದೆ. "ಈಗ ಮಾತ್ರ ಅವರ ಮುಂದೆ ಬರಬೇಡಿಯಪ್ಪಾ ದಮ್ಮಯ್ಯಾ, ಅವರು ನಶ್ಯದ ಡಬ್ಬಿಯನ್ನು ಕಳೆದುಕೊಂಡಿದ್ದಾರೆ " ಎಂದು ಹೊಬಾಗಿಲಲ್ಲೇ ಹುಷಾರಿ ಕೊಟ್ಟರು. ಕೊಯ್ ಕೊಯ್ ಸುರುವಾಯಿತು. "ಇದಕ್ಕೇನಾ ನೀವು ಅವರನ್ನು ಕೇಳಲು ಬಂದದ್ದು ? ಇದಕ್ಕೆಲ್ಲಿದೆ ಔಷಧಿ! ಯಾರಾದರೊಬ್ಬ ಜೋಯಿಸರನ್ನು ಕೇಳಿರಿ " ಎಂದವರೇ ಸಿಡಿಪಿಡಿಮಾಡುತ್ತಿದ್ದ ನಶ್ಯಹೀನ ವೈದ್ಯರ ಶೈತ್ಯೋಪಚಾರಕ್ಕಾಗಿ ಒಳಜಾರಿಬಿಟ್ಟರು.

ಯಾರಿಗೆ ಬಿಟ್ಟರೂ ಭಟ್ಟರಿಗಂತೂ ಬಿಡುವಂತಿಲ್ಲವಲ್ಲ ? ಎಲ್ಲದಕ್ಕೂ ಅವಸರ ಅವರಿಗೆ. ಕುಚೇಲನಂತೆ ಬರಮಾಡಿಕೊಂಡು ಹರಕು ಚಾಪೆ ಹಾಸಿ ಕೂಡಿಸಿ, ಮಂತ್ರದೋಪಾದಿಯಲ್ಲಿ ಜಪಿಸೇಬಿಟ್ಟರು. 'ಇದು ನೋಡಿ ಸ್ವಾಮಿ, ಇದು ಎಪ್ಪತ್ತಿನ ಕೆಮ್ಮು. ಇದಕ್ಕೆ ಔಷಧಿ ಇಲ್ಲ, ಇದು ಗುಣವಾಗುವ ರೋಗವೂ ಅಲ್ಲ, ಇದು ಪ್ರಾರಬ್ಧ, ದುಷ್ಕರ್ಮ, ಕಾಟ. ಇದಕ್ಕೆ ಕೇವಲ

ಮಂತ್ರ ಬಲವೇ ಮದ್ದು. ಮಗುವಿನ ಕತ್ತಿನಲ್ಲಿ ಒಂದು ಯಂತ್ರ(ತಾಯಿತ) ಬರೆದು ಕಟ್ಟಿಸಬೇಕು. ನಾನೇ ಕಟ್ಟುತ್ತೀನಿ. ಎಪ್ಪತ್ತು ಊರುಗಳ ಹೆಸರು, ಎಪ್ಪತ್ತು ನದಿಗಳ ಹೆಸರು, ಎಪ್ಪತ್ತು ಗುಡ್ಡಗಳ, ಹೆಸರು, ಎಪ್ಪತ್ತು ಗವಿಗಳ ಹೆಸರು, ಎಪ್ಪತ್ತು ಸಿನಿಮಾ ನಟಿಯರ ಹೆಸರು, ಎಪ್ಪತ್ತು ಮಂತ್ರಿಗಳ ಹೆಸರು. ಎಪ್ಪತ್ತು ಕಾಡುಮೃಗಗಳ ಹೆಸರು ಒಂದು ಕಾಗದದಲ್ಲಿ ಬರೆದು ತಾಮ್ರದ ತಗಡಿನಲ್ಲಿ ಯಂತ್ರ ಮಾಡಿಸಿ ಅದರಲ್ಲಿಟ್ಟು ಮಂತ್ರಿಸಿ ಮಗುವಿನ ಕತ್ತಿನಲ್ಲಿ ಕಟ್ಟಿದರೆ ಎಪ್ಪತ್ತೆ ದಿನದಲ್ಲಿ ಈ ಕೆಮ್ಮು ಮಾಯವಾಗುತ್ತದೆ" ಎಂದು ಒಂದೇ ಉಸಿರಿನಲ್ಲಿ ಹೇಳಿ ಮುಖ ನೋಡಿದರು. ಆಗತ್ಯವಾಗಿ ಆಗಲಿ ಸ್ವಾಮಿ ಎಂದು ತಲೆ ತೂಗಿದೆ. "ಯಂತ್ರಕ್ಕೆ ಬೇಕಾಗುವ ತಾಮ್ರದ ತಗಡನ್ನು ಮಾತ್ರ ಅಂಗಡಿಯಿಂದ ನೀವೇ ತಂದು ಕೊಡಿ. ಬೇರೆ ಎಲ್ಲವೂ ಸಿದ್ಧವಿದೆ." ಎಂದು ಅವಸರಪಡಿಸಿದರು. ನಾನೇ ಧನ್ಯ ಎಂದವನೇ ಮಗುವನ್ನು ಮನೆಯಲ್ಲಿ ಬಿಟ್ಟು ನೇರವಾಗಿ ಅಂಗಡಿಗೆ ಸಾಗಿದೆ. ಎದುರಿಗೇ ಇದ್ದವು ತಾಮ್ರದ ತಗಡಿನ ಹಾಳೆಗಳು. ಒಂದು ಯಂತ್ರಕ್ಕೆ ಬೇಕಾಗುವಷ್ಟು ತಗಡಿನ ಬೆಲೆ ಎಷ್ಟು ಎಂದು ಕೇಳಿದೆ "ಒಂದೇ ಆಣೆ ಸ್ವಾಮಿ" ಎಂದು ಹೇಳಿದವನೇ ಕೈಯೊಡ್ಡಿದ. ಆಣೆ ಕೊಟ್ಟೆ. "ಇದು ಸರಿ ಸ್ವಾಮಿ ಪರ್ಮಿಟ್ ಎಲ್ಲಿದೆ" ಎಂದು ತಕರಾರು ಹೂಡಿದ. ಆಮೇಲೆ ತಿಳಿಯಿತು. ತಹಶೀಲದಾರರ ಪರ್ಮಿಟ್ ಬೇಕೆಂದು ತಾಮ್ರದ ತಗಡಿಗೆ ಕಂಟ್ರೋಲ್ ಬಡಿದಿತ್ತು. ತಂದರಾಯಿತು, ಇದಕ್ಕೇಕೆ ಯೋಚನೆ ಎಂದು ಕಚೇರಿಯ ಕಡೆ ಕಾಲ್ತೆಗೆದೆ. ಎಲ್ಲರೂ ಚಿರ ಪರಿಚಿತರೇ! ಮರ್ಯಾದೆ ಮಾಡಿ ಮೇಲೆ ಕೂಡಿಸಿ ಎಲ್ಲವನ್ನೂ ವಿಚಾರಿಸಿದರು. ತಾಮ್ರದ ತಗಡು ಎಂದ ಕೂಡಲೇ ಮುಖ ಜೋಲು ಹಾಕಿ ಪೇಚಾಡ ಹತ್ತಿದರು. "ನಿನ್ನೆ ಬರಬಾರದಿತ್ತೆ ನೀವು? ಇವತ್ತೇ ಸರಕಾರದಿಂದ ಹುಕುಂ ಬಂದಿದೆ."

"ಏನೆಂದು?" ಎಂದು ಗಾಬರಿಯಿಂದ ಕೇಳಿದೆ.

"ತಾಮ್ರದ ತಗಡಿಗೆ ಪರ್ಮಿಟ್ಟು ಕೊಡುವ ಅಧಿಕಾರವು ಕಲೆಕ್ಟರರಿಗೆ ಮಾತ್ರವೇ ಇದೆ ಎಂದು. ಇವತ್ತಿನಿಂದ ನಾವು ಕೊಡುವಂತಿಲ್ಲ" ಎಂದು ಹೇಳಿ ಕೈಕುಲಿಕಿ ಬೀಳ್ಕೊಟ್ಟರು.

ಬಿಸಿಯಲ್ಲಿಯೇ ಬಿಸಿ ಎಂದುಕೊಂಡು ಹಾಗೆಯೇ ಕಲೆಕ್ಟರರ ಆಫೀಸಿನ ಅಟ್ಟವನ್ನು ಏರಿದೆ. ಅಲ್ಲಿಯೂ ಸುಸ್ವಾಗತ. ಎಲ್ಲರೂ ತಿಳಿದವರೇ. ಸಿ. ಐ. ಡಿ. ಅಧಿಕಾರಿಯು ಧ್ವನಿವಾಹಕ ಯಂತ್ರವನ್ನು ತಂದಾಗಿನಿಂದ ಇಂದಿನವರೆಗೂ ನಡೆದದ್ದೆಲ್ಲವನ್ನೂ ಆದ್ಯಂತವಾಗಿ ಎಲ್ಲರ ಮುಂದೆಯೂ ಹೇಳಿದೆ.

"ಅಯ್ಯೋ, ಇಷ್ಟೇನೆ ? ಅದಕ್ಕೇಕೆ ಯೋಚನೆ ? ಒಂದು ಅರ್ಜಿ ಬರೆದುಕೊಡಿ, ನಾಳೆಯೇ ನಿಮ್ಮ ಮನೆಬಾಗಿಲಿಗೇ ಬರುತ್ತೆ ಪರ್ಮಿಟ್ಟು" ಎಂದು ಬಿಳೀಕಾಗದವೊಂದನ್ನು ಮುಂದೆ ಚಾಚಿದರು. ಅವರು ಹೇಳಿದಂತೆಲ್ಲ ಬರೆದುಕೊಟ್ಟು ಮನೆಗೆಬಂದು ನಾಳಿನ ಹಾದಿಕಾಯುತ್ತ ಗಲ್ಲಕ್ಕೆ ಕೈಕೊಟ್ಟು ಕುಳಿತೆ. ಅಕೋ ಇಕೋ ಇಂದು ಅಂದು ಎಂದು ಹಿಂದು ಮುಂದು ಆಡ್ಡಾಡುವದರೊಳಗಾಗಿ ಹದಿನೈದು ದಿನಗಳು ಉರುಳಿದವು. ಮೇಲಿನವರನ್ನಾದರೂ ಕಂಡು ಬಿಡೋಣವೆಂದು ಸಿಟ್ಟಿಗೆ ಬಂದು ಹೊರಬಿದ್ದಾಗ ಹಾದಿಯಲ್ಲಿಯೇ ಅಂಚೆ ಜವಾನನು ಅಡ್ಡಬಂದು ನನ್ನ ಸಹಿ ತೆಗೆದುಕೊಂಡು ಒಂದು ಲಕೋಟೆಯನ್ನು ಕೈಗೆ ಕೊಟ್ಟ. ಅಂತೂ ಪರ್ಮಿಟ್ಟು ದೊರೆಯಿತಲ್ಲವೆಂದು ಲಕೋಟೆ ಹರಿದು ನೋಡಿದರೆ. ನನ್ನ ಅರ್ಜಿ ನನಗೇ ವಾಪಸ್! ನಾನು ಕೊಟ್ಟ ಅರ್ಜಿ ಅದರ ಫಾರ್ಮಿನ ನಮೂನೆಯಲ್ಲಿಲ್ಲವೆಂದು ತಿಳಿಸಲಾಗಿತ್ತು. ಈ ಉತ್ತರ ಕೊಡಲು ಹದಿನೈದು ದಿವಸಗಳು ಏಕಪ್ಪಾ ಎಂದು ವಿಚಾರಿಸಿದೆ. ಅದೂ ನನ್ನದೇ ತಪ್ಪು! ನನ್ನ ದಂತಹ ಹೆಸರಿನವರಿನ್ನೊಬ್ಬರು ಇದ್ದಾರಂತೆ; ಮೊದಲು ಅವರಿಗೆ ಹೋಗಿ ಆ ಮೇಲೆ ನನಗೆ ಬಂದಿದೆ, ಈ ಲಕೋಟೆ. ಆಯಿತು, ಅವರು ಕೊಟ್ಟ ಫಾರ್ಮನ್ನು ತುಂಬಿ ಕೊಟ್ಟಾಯಿತು. ಈಗಿಂದೀಗಲೇ ಪರ್ಮಿಟ್ಟು ಕೊಡಿ ಎಂದು ಕುಳಿತೇ ಬಿಟ್ಟೆ. ಕೆಮ್ಮಿನ ಪುಣ್ಯ ಇನ್ನೂ ಪೂರ್ತಿ ಸವೆದಂತಿಲ್ಲ.

"ತಾಮ್ರದ ತಗಡಿಗೆ ಪರ್ಮಿಟ್ಟು ಕೊಡುವ ಅಧಿಕಾರವನ್ನು ಕಲೆಕ್ಟರರಿಂದ ಐದೇ ದಿನಗಳ ಹಿಂದೆಯೇ ಕಿತ್ತುಕೊಳ್ಳಲಾಯಿತು. ಕಲೆಕ್ಟರರು ಅರ್ಜಿಯನ್ನು ಸ್ವೀಕರಿಸಿ ಸಿವಿಲ್‌ಸಪ್ಲೈಸ್ ಅಧಿಕಾರಿಗಳಿಗೆ ಕಳಿಸುತ್ತಾರೆ; ನಿಮಗೆ ಅಲ್ಲಿಂದ ಪರ್ಮಿಟ್ಟು ನೇರವಾಗಿ ಬರುತ್ತದೆ." ಎಂದು ಧೈರ್ಯ ಕೊಟ್ಟರು. ದೊಡ್ಡೋರ ಕಚೇರಿಗಳಲ್ಲಿ ಹೆಚ್ಚು ವಿಳಂಬವಾಗುವದಿಲ್ಲ, ಎಂದು ಧೈರ್ಯದಿಂದ ಮನೆಗೆ ಸಾಗಿದೆ. ನಿಜವಾಗಿಯೂ ವಿಳಂಬವಾಗಲೇ ಇಲ್ಲ. ಸಿವಿಲ್

ಸಪ್ಲೈಸ್ ಅಧಿಕಾರಿಗಳಿಂದ ಒಂದು ವಾರದಲ್ಲಿಯೇ ಬಂದು ಬಿಟ್ಟಿತು; ಪರ್ಮಿಟ್ಟು ಅಲ್ಲ—ಉತ್ತರ: "ನೀವು ಬೇಡಿರುವ ತಾಮ್ರದ ತಗಡು ಭೂಸಾಗುವಳಿ ಕಾರ್ಯಕ್ಕಲ್ಲವಾದುದರಿಂದ ಅದಕ್ಕೆ ಪರ್ಮಿಟ್ಟು ಕೊಡಲು ನನಗೆ ಅಧಿಕಾರವಿಲ್ಲವೆಂದು ತಿಳಿಸಲು ವಿಷಾದವಾಗುತ್ತದೆ. ನಿಮಗೆ ತಗಡು ಬೇಕಾಗಿರುವದು "ಯಂತ್ರ"ಕ್ಕಾಗಿ ಎಂದು ನೀವು ಅರ್ಜಿಯಲ್ಲಿ ನಮೂದಿಸಿರುವದರಿಂದ ನಿಮ್ಮ ಅರ್ಜಿಯನ್ನು ಕಂಟ್ರೋಲರ್ ಆಫ್ ಕಂಟ್ರೋಲ್ಡ್ ಕಮೋಡಿಟಿಸ್ ಅವರ ಕಡೆ ರವಾನೆಮಾಡಲಾಗಿದೆ. ಮುಂದಿನ ಪತ್ರ ವ್ಯವಹಾರವನ್ನು ದಯವಿಟ್ಟು ಅವರೊಂದಿಗೆ ಮಾಡುವಿರಷ್ಟೆ?" ಎಂದು ಉತ್ತಮ ಭಾಷೆಯಲ್ಲಿ ಬರೆಯಲಾಗಿತ್ತು. ಈ ಕಾಗದವನ್ನು ಕಂಚಿಗೊತ್ತಿಕೊಂಡು, ಮರುದಿನವೇ ಕಂಟ್ರೊಲರ್ ಆಫ್ ಕಂಟ್ರೋಲ್ಡ್ ಕಮೋಡಿಟೀಸ್ ಅವರಿಗೆ ಪತ್ರಬರೆದಿಟ್ಟು ಅದರ ಮರುದಿನವೇ ರವಾನೆಮಾಡಿದೆ. ಎಂಟೇ ದಿನಗಳಲ್ಲಿಯೇ ಬಾಗಿಲಿಗೆ ಬಂದಿತು ಪರ್ಮಿಟ್ಟಲ್ಲ, ಉತ್ತರ "ನೀವು ತಾಮ್ರದ ತಗಡು ಯಂತ್ರಕ್ಕಾಗಿ ಬೇಕಾಗಿದೆ ಎಂದು ತಿಳಿಸಿರುವದರಿಂದ, ಅದು ಮಶಿನರಿ ವಿಭಾಗಕ್ಕೆ ಸಮ್ಮಂಧಿಸುತ್ತದೆ. ಕಾರಣ ನಿಮ್ಮ ಅರ್ಜಿಯನ್ನು ಸುಪರಿಂಟೆಂಡೆಂಟ ಆಫ್ ಮಶಿನರೀಸ್ ಅವರ ಕಡೆ ಕಳಿಸಲಾಗಿದೆ. ದಯವಿಟ್ಟು ಈ ಬಗ್ಗೆ ಪತ್ರ ವ್ಯವಹಾರವನ್ನು ಅವರೊಂದಿಗೇ ಮಾಡಿರಿ" ಎಂದು ಆಜ್ಞೆ ಬಂದಿದ್ದಿತು ಅದರಲ್ಲಿ. ಆಯಿತು, ಸುಪರಿಂಟೆಂಡೆಂಟ್ ಆಫ್ ಮಶಿನರೀಸ್ ಅವರಿಗೂ ಪತ್ರ ಬರೆದು ಅವರು ಪ್ರಸನ್ನರಾಗುವ ಮುಹೂರ್ತಕ್ಕಾಗಿ ಬಾಯಿತೆರೆದು ಕುಳಿತೆ. ವಿಳಂಬವಂತೂ ಇಲ್ಲವೇ ಇಲ್ಲ. ಒಂದೇ ವಾರದಲ್ಲಿ ಅವರಿಂದಲೂ ಬಂದೇ ಬಿಟ್ಟಿತ್ತು, ಉತ್ತರ "ತಾಮ್ರದ ತಗಡಿನಲ್ಲಿ ಯಂತ್ರವನ್ನು ಬರೆಯಿಸಿ ಬೇನ್ನೇನನ್ನೊ ಇಡುತ್ತಾರಾದ ಕಾರಣ ಇದು ಮಶಿನರೀಸ್ ವಿಭಾಗಕ್ಕೆ ಸೇರದೆ 'ಸ್ಪೇರ್ ಪಾರ್ಟ್ಸ್' ವಿಭಾಗದಲ್ಲಿ ಬರುವದಾಗಿದೆ. ನಿಮ್ಮ ಪತ್ರವನ್ನು ಆಫೀಸರ್-ಇನ್‌ಚಾರ್ಜ್ ಆಫ್ ಸ್ಪೇರ್‌ಪಾರ್ಟ್ಸ್ ಅವರಿಗೆ ಕಳಿಸಿದ್ದೇವೆ. ಅವರೇ ನಿಮಗೆ ಪರ್ಮಿಟ್ಟು ಕೊಡತ್ತಾರೆ "ಎಂದಿದ್ದಿತು ಅದರಲ್ಲಿ" ಅವರ ಇಚ್ಛೆ, ಅವರು ಏನಾದರೂ ಮಾಡಲಿ ಎಂದು ಸುಮ್ಮನೆ ಕೈಮುಚ್ಚಿ ಕುಳಿತುಬಿಟ್ಟೆ. ಕೂಡಲೆ ಸುರುವಾಯಿತು "ಠೊಯ್ ಠೊಯ್." ಅಳದೆ ಕುಳಿತರೆ ಅಮ್ಮನೂ ಅನ್ನ ಇಕ್ಕುವದಿಲ್ಲವೆಂಬದು ನೆನಪಾಗಿ ಅವರಿಗೂ ಪತ್ರ ಬರೆದು ಒಂದೇ

ವಾರದೊಳಗಾಗಿ ಉತ್ತಮವು ಉತ್ತರವನ್ನು ತರಿಸಿಕೊಂಡೆ. "ಕೂಸಿನ ಕೆಮ್ಮಿಗೂ ಸ್ಪೇರ್ ಪಾರ್ಟ್ಸಿಗೂ ಅದಾವ ಸಮ್ಮಂಧವೂ ಇಲ್ಲ. ನೀವು ಬೇಡಿದಂತೆ ತಾಮ್ರದ ತಗಡಿಗೆ ಪರ್ಮಿಟ್ಟು ಕೊಡಲು ನನಗೆ ಸಾಧ್ಯವಿಲ್ಲ. ನಿಮ್ಮ ಅರ್ಜಿಯನ್ನು ಪುನಃ ಸಿವಿಲ್ ಸಪ್ಲೈಜ ಅಧಿಕಾರಿಗಳಿಗೇ ಕಳಿಸಲಾಗಿದೆ. ಈ ವಿಷಯದಲ್ಲಿ ಮುಂದಿನ ಪತ್ರವ್ಯವಹಾರವನ್ನೆಲ್ಲ ಅವರೊಂದಿಗೇ ಮಾಡಬೇಕಾಗಿ ವಿನಂತಿ " ಎಂದಿದ್ದಿತು ಅದರಲ್ಲಿ. ನೀನೆ ಗತಿ ಎಂದು ಸಿವಿಲ್ ಸಪ್ಲೈಜ ಅಧಿಕಾರಿಗಳಿಗೇ ಮೊರೆ ಹೋಗಬೇಕಾಯಿತು ಪುನಃ ಎರಡಾಣೆ ಅವರ ಶ್ರೀಪಾದಕ್ಕೆ ತರ್ಪಣಕೊಟ್ಟು ಅವರಿಗಿನ್ನೊಂದು ಪತ್ರ ಬರೆದೆ. ದೊಡ್ಡೋರ ಕಚೇರಿಗಳಲ್ಲಿ ವಿಳಂಬವಾಗುತ್ತೆಯೇ ? ಒಂದೇ ವಾರದಲ್ಲಿಯೇ ಮರುತ್ತರ ಬಂದೇ ಬಿಟ್ಟಿತು ಅವರಿಂದ "ಸರಕಾರದಲ್ಲಿ ಅನೇಕ ಖಾತೆಗಳು ಬೆಳೆದಿರುವದರಿಂದ ನಿಮ್ಮ ಅರ್ಜಿಯನ್ನು ಯಾವ ಖಾತೆಯು ಹಿಡಿಯಬೇಕೆಂಬ ಬಗ್ಗೆ ತಕರಾರು ಬಂದಿದೆ ಈ ಸಂಶಯ ನಿವಾರಣೆಗಾಗಿ ನಿಮ್ಮ ಅರ್ಜಿಯನ್ನು ಸರಕಾರಕ್ಕೆ ಕಳಿಸಲಾಗಿದೆ. ಸರಕಾರದ ಉತ್ತರವು ಬಂದಕೂಡಲೇ ನಿಮ್ಮ ಅರ್ಜಿಗೆ ಗಮನ ಕೊಡಲಾಗುವದು " ಎಂದು ಸೂಚಿಸಿದ್ದಿತು ಅದರಲ್ಲಿ.

ಅಲ್ಲಿ ಇಲ್ಲಿ ವಿಚಾರಿಸಿದೆ. ತಿಳಿದವರೊಬ್ಬರು ಹೇಳಿದರು: ವ್ಯವಸಾಯ ಮಂತ್ರಿಗಳೇ ಇದನ್ನು ನಿರ್ಧರಿಸಬೇಕಂತೆ. ವಿಲಾಯಿತಿಗೆ ಹೋಗಿದ್ದ ಈ ಮಂತ್ರಿಗಳು ಎರಡೇ ವಾರಗಳಲ್ಲಿ ಹಿಂದೂ ದೇಶಕ್ಕೆ ಹಿಂದಿರುಗಿದರು. ಆದರೂ ನನ್ನ ದುರ್ದೈವ! ಹಳೆಯ ಮತ್ತು ಹೊಸ ಮಂತ್ರಿಗಳಲ್ಲಿ ಮನಸ್ತಾಪ ಉಂಟಾಗಿ ಪರಸ್ಪರ ಆರೋಪಗಳನ್ನು ಮಾಡಿ ದೇವರಲ್ಲಿ ದೂರು ತಂದುಕೊಂಡಿದ್ದಾರೆಂದು ವರ್ತಮಾನ ಪತ್ರಿಕೆಯ ವಿಶೇಷ ಸುದ್ದಿ! ಈ ವಿಚಾರಣೆ ಮುಗಿಯುವ ವರೆಗೂ ನನಗೆ ಯಂತ್ರ ಬರೆಸಲು ತಾಮ್ರದ ತಗಡು ದೊರೆಯುವಂತಿಲ್ಲ. ನನ್ನ ಮಗುವಿನ ಕೊಯ್ ಕೊಯ್ ತಪ್ಪುವಂತಿಲ್ಲ.

ಬೆಲ್ಲ ತರಲು ಸೆಟ್ಟಿಯ ಅಂಗಡಿಗೆ ಹೋದಾಗ ಸೆಟ್ಟರು ಪ್ರಶ್ನಿಸಿದರು: "ಯಂತ್ರ ಬರೆಸಲು ತಾಮ್ರದ ತಗಡು ಬೇಡಿದಿರಲ್ಲ ಸ್ವಾಮಿ ಏಕೆ ಬರಲೇ ಇಲ್ಲ ಮತ್ತೆ?" "ಇನ್ನೂ ಪರ್ಮಿಟ್ಟು ದೊರೆಯಲೇ ಇಲ್ಲ ಸೆಟ್ಟರೆ? ಎಂದು ಹೇಳಿದೆ. "ಅದಕ್ಕೇಕೆ ಸ್ವಾಮಿ ಪರ್ಮಿಟ್ಟು ?" ಒಂದಾಣೆ ತಗಡಿಗೆ ? ಮೇಲೆ ಎರಡಾಣೆ

ಕೊಟ್ಟು ಬಿಡಿ, ನಾನೇ ತಗಡು ಕೊಡುತ್ತೇನೆ " ಎಂದು ನಗುತ್ತ ಹೇಳಿ ಕೈಯೊಡ್ಡಿದರು ಸೆಟ್ಟರು.

ಒಂದಾಣೆ ತಗಡಿಗೆ, ಎರಡಾಣೆ ಕಂಟ್ರೋಲ ಕಲ್ಪವೃಕ್ಷಕ್ಕೆ ಕೊಟ್ಟು ಕೈಮುಗಿದು ತಾಮ್ರದ ತಗಡಿನೊಂದಿಗೆ ಮನೆಗೆ ಬಂದೆ. ತೊಟ್ಟಿಲಲ್ಲಿ ಮಲಗಿ ಚಿರಂಜೀವ ಗೊರಗೆ ಹೊಡೆಯುತ್ತಿದ್ದ.

" ಇದೇನೆ ಕೊಯ್ ಕೊಯ್ ಮಾಯವಾಗಿದೆಯಲ್ಲ?" ಎಂದು ಗಾಬರಿಯಿಂದ ಕೇಳಿದೆ ಮನೆ ಅವಳನ್ನು.

" ಇನ್ನೆಷ್ಟು ದಿನಗಳು ಇರುತ್ತೆ ಆ ಕೆಮ್ಮು? ಎಪ್ಪತ್ತು ದಿನಗಳು ಆಯಿತು, ಕೆಮ್ಮು ತಾನೇ ಹೋಯಿತು. " ಎಂದು ಹುಸಿನಗು ನಕ್ಕಳು.

ಕೂಡಲೇ ಹೊರಗೆ ಹೊರಡಲು ಹಿಂದಿರುಗಿದೆ " ಎಲ್ಲಿಗೆ ಪುನಃ ಹೊರಟಿರಿ?" ಎಂದು ಅಡ್ಡಬಂದಳು.

" ಎಲ್ಲಿಗೂ ಇಲ್ಲ. ಕಳ್ಳ ಸಂತೆಯಲ್ಲಿ ತಂದ ಈ ತಾಮ್ರದ ತಗಡನ್ನು ಕಂಟ್ರೋಲ್ ಕಲ್ಪವೃಕ್ಷವನ್ನು ಬೆಳೆಸಿದ ಸರಕಾರಕ್ಕೆ ಇನಾಮಾಗಿ ಕೊಟ್ಟು ಬರುತ್ತೇನೆ " ಎಂದು ಅವಸರದಲ್ಲಿ ಓಡಿದೆ.

# ತಿಂಮ ಗರ್ವಭಂಗ

ತಿಂಮನ ತಲೆ ! ಹಾಳು. ತಿಂಮನ ತಲೆ ಹೊರಬಂದುದೇ ತಡ, ರಪರಪ ಬಿದ್ದುವು ಅಕ್ಕಿಕಾಳು. ಎಲ್ಲರೂ ಅಕ್ಕಿಕಾಳು ಎಸೆದರು ಎಂದು ಹಿರಿ ಹಿರಿ ಹಿಗ್ಗಿದ ತಿಂಮ. ನಗುನಗುತ್ತ ಇದ್ದೊಂದು ತಲೆ ಬಾಗಿದ. ಠಪ್! ತಲೆ ಕೆರೆದು ಕೈನಿಂದ ನೋಡಿದ, ದೊಡ್ಡೊಂದು ಕಲ್ಲು ತಲೆಗೆ ಬಡಿದು ಕೆಳಗೆ ಬಿದ್ದು ದೂರ ಸಿಡಿಯಿತು. ಹಲ್ಲು ಕಿರಿದರು ಕಲ್ಲು ಎಸೆದವರು; ಮುಂದೆ ಬಂದು ಮುಖ ನೋಡಿದರು—ತಿಂಮ ಹೇಗೆ ಅಳುತ್ತಾನೋ ನೋಡಬೇಕೆಂದು. ಪಾಪ ! ಕಲ್ಲಿನ ದುರ್ದೈವ !! ತಿಂಮ ನಕ್ಕ. ಕಲ್ಲು ಅತ್ತಿತು !!!

“ ಏನೋ ತಿಂಮಣ್ಣ. ಹೇಗಿದೆ ತಲೆ ? ಕಲ್ಲು ಬಡಿದು ನೋವಾಯಿತೇನೋ ನಿನ್ನ ತಲೆಗೆ ? ” ಎಂದರು ಅವರಿವರು.

“ ತಲೆ ಮಾತ್ರ ಬೇಕು. ತಲೆನೋವು ಬೇಡ ಎಂದರೆ ಹೇಗೆ ನನ್ನೊಡೆಯಾ ? ಕಲ್ಲು ಒಗೆಯುವ ಕೈಗೇನು ತಲೆ ಇರಲೇಬೇಕೆಂಬ ನಿಯಮವೂ ಇಲ್ಲ. ”

“ ಅಲ್ಲಪ್ಪೋ, ಹೇಗಿವೆ ಅಕ್ಕಿಕಾಳು ? ”

“ ರೇಶನ್ ಅಕ್ಕಿ ಸ್ವಾಮಿ. ಸರಕಾರೀ ಕಸ. ಈ ಯುಗದಲ್ಲಿ ಕಲ್ಲಿಲ್ಲದ ಅಕ್ಕಿಕಾಳು ಎಲ್ಲಿವೆ ? ”

ಸುತ್ತಮುತ್ತ ನಿಂತವರೆಲ್ಲ ಘೊಳ್ಳೆಂದು ನಕ್ಕುಬಿಟ್ಟರು. ಬೇರೇನು ಬೇಕು ? ತಿಮ್ಮನ ತಲೆಯು ಹೊಟ್ಟೆತುಂಬಿ ಢರ್ ಎಂದು ತೇಗಿತು. ಕಲ್ಲೆಸೆದ ಕೈಗೆ ನಾಚಿಕೆಯಾಯಿತು; ಕಾಣಿಸಿಕೊಳ್ಳದೆ ಕಾಡಿಗೆ ಹೋಯಿತು.

‘ ಹನಿ ಹನಿ ಕೂಡಿದರೆ ಹಳ್ಳ—ಕೋತಿಗೆ ಕಿರೀಟ ಇಟ್ಟರೆ ಕೊಳ್ಳ ’ ಎಂದಂತೆ ತಿಂಮನ ತಲೆಗೆ ವಿಪರೀತ ಗರ್ವ ಬಂದಿತು, ಅಲ್ಲಲ್ಲಿ ಸಿಕ್ಕ ಸ್ವಾಗತ

ದಿಂದ. ಒಂದೇ ಗಳಿಗೆಯಲ್ಲಿ ಗರ್ ಎಂದು ತಿರುಗಿತು ತಿಂಮನ ತಲೆಯು ತಲೆ; ಬೆನ್ನ ಕಡೆ ಮುಖವಾಯಿತು.

ಸೂರ್ಯೋದಯ ಸೂರ್ಯಾಸ್ತಗಳು ಕಂಟ್ರೋಲಿ ಇಲ್ಲದೆ ಅನೇಕ ಬಾರಿ ಆದವು. ದಿನಗಳು ಉರುಳಿ ತಿಂಗಳುಗಳು ತಂಗಳಾದವು. ಕೈಲಾಸದಲ್ಲಿ ಕಾಲು ಚಾಚಿ ಮಲಗಿದ್ದ ತಿಂಮನ ತಲೆಗೆ ಒಂದು ಬಾರಿ ಇದ್ದಕ್ಕಿದ್ದಂತೆ ಭೂಲೋಕದ ನೆನಪಾಯಿತು. ತನ್ನ ತಲೆಯ ಪರ್ವಸ್ಸು ಅಲ್ಲಿ ಇನ್ನು ಹೇಗಿದೆಯೋ ನೋಡಬೇಕು ಎಂಬ ಚಪಲ ಸುರುವಾಯಿತು, ತಿಂಮನ ತಲೆಯ ಮನಸ್ಸಿಗೆ. ಕಾಲಿಲ್ಲದ ತಿಂಮನ ತಲೆಯು ಕೈಲಾಸದ ಮಾಲೀಕನ ಕಾರಿನಲ್ಲಿ ಉರುಳುತ್ತ ಬಂದಿತು, ಭೂಲೋಕದಲ್ಲಿಯ ಬುಕ್ಕಿನ ಅಂಗಡಿಗೆ. ಸಾಲಾಗಿ ಕೂಗುತ್ತಿದ್ದವು ಸಹಸ್ರಾರು ಪತ್ರಿಕೆ ಪುಸ್ತಕಗಳು. ದಿನಪತ್ರಿಕೆಗಳು ಕುಂಟುತ್ತ ಓಡುತ್ತಿದ್ದವು. ವಾರಪತ್ರಿಕೆಗಳು ಕಾಡುವವರನ್ನು ಕರೆಯುತ್ತ ಗೊರಗುತ್ತಿದ್ದವು. ಮಾಸಪತ್ರಿಕೆಗಳು ಮಾಸಿಹೋಗಿ ಮೂಸುವವರಿಲ್ಲದೆ ಮುಸುಗುತ್ತಿದ್ದವು, ವಾರ್ಷಿಕ ವಿಶೇಷ ಸಂಚಿಕೆಗಳು ಸತ್ತು ಬಿದ್ದು ನಾರುತ್ತಿದ್ದವು. ಅಂತ್ಯಕ್ರಿಯೆಗೆ ಆರಾಣ್ಯೆ ಇಲ್ಲದೆ! ಒಟ್ಟಾರೆ ನೋಡುವಂತಿದ್ದಿತು (ಅಯ್ಯೋ ಪಾಪ!) ಜಾತಿಗೆಟ್ಟ ಬಿಳೀ ಕಾಗದದ ಸಂತೆ !!

ತಿಂಮನ ತಲೆ ದೂರ ನಿಂತು ನೋಡಿತು, ಯಾವಾವ ರೂಪಗಳು ಇವೆಯೋ ಈ ಸಂತೆಯಲ್ಲಿ ಎಂದು. ಗದುಗಿನ 'ಗರ್ಜನೆ' ಎದ್ದು ಕಾಣುತ್ತಿದ್ದಿತು, ಚಿಕ್ಕ ಧ್ವನಿಯಿಂದ. ಬರುತ್ತೇನೆಂದು ಹೆದರಿಸುತ್ತಿರುವ 'ರಂಜನೆ' ಬಂದರೂ ಬರಬಹುದಾದ 'ವಂಚನೆ.' ಹುಬ್ಬಳ್ಳಿಯ 'ಹೊಲಸು,' ಧಾರವಾಡದ 'ದೊಡ್ಡ ಜಿಲೆ,' ಬೆಳಗಾಂವಿಯ 'ಬಾರಕೋಲು.' ಒಕ್ಕಾರಿಯ 'ಜೈ,' ಪುಣೆಯ 'ಫ್ರಕ್ಟ್' ಮದ್ರಾಸಿನ 'ಅತಿಮಾತು,' ಬೆಂಗಳೂರಿನ 'ಬೇಡಿದಷ್ಟು ಫುಟಗಳು,' ಮೈಸೂರಿನ 'ಮಹಾಸ್ವಾಮಿ,' ಬಿಜಾಪುರದ 'ಬರಗಾಲ,' ರಾಮದುರ್ಗದ 'ದುರಂತ,' ಉಡುಪಿಯ 'ಇಡ್ಲಿ,' ಹರಿಹರದ 'ಹಾಳು ಕತೆಗಳು,' ಕೊಲ್ಲಾಪುರದ 'ಕೇಳ್ಗತ್ತಿಗಳು,' ದಾವಣಗೇರಿಯ 'ಹಣ-ನೊಣ,' ಚಿತ್ರದುರ್ಗದ 'ಚೇಳು,' ಗಜೇಂದ್ರಗಡದ 'ಗತಾರ' ಮುಂತಾದ ಎಲ್ಲರೂ (ಬರೆದವರು?) ಓದಲೇಬೇಕಾದ ತ್ರೈವಾರ್ಷಿಕ, ದ್ವಿಮಾಸಿಕ, ವಾರಿಕ, ದೈನಿಕ, ಗಳಿಗೆಯ ಪತ್ರಿಕೆಗಳು ಗುಡ್ಡದಂತೆ

ಏರಿದ್ದಷ್ಟೆ. ಕೊಳ್ಳುವ ದೊಡ್ಡ ವಡ್ಡ ವಯೋಳು ದಣಿಗಳ ಅಭಾವದಿಂದ. ಕೊಳ್ಳುವವರ ಅಪ್ಪನಂತೆ ತಿಂಮ ಮೆಲ್ಲನೆ ವಿಚಾರಿಸಿದ. ಅದೆಷ್ಟು ಇದೆಷ್ಟು ಎಂದು. ಆಸಕ್ತಿ ಹಣ ಇಕ್ಕಿ ಗಲ್ಲಕ್ಕೆ ಕೈಯಿಕ್ಕಿ ಉಸ್ಸೆಂದು ಕುಳಿತಿದ್ದ ಪುಸ್ತಕ ಪೂಜಾರಿ ಪೇಪರ ಏಜಂಟ ಓಡಿಯೆ ಬಂದ. ನೊಣವನ್ನು ಕಂಡ ಜೇಡನಂತೆ, ಜನರನ್ನು ಕಂಡ ಭಾಷಣಕಾರನಂತೆ. ಅಧಿಕಾರದ ರುಚಿಕಂಡ ದೇ. ಭ. ನಂತೆ. ಒಂದನೂರಾ ನಾಲ್ವತ್ತೆಂಟು ಪುಟಕ್ಕೆ ಒಂದೇ ಕಾಲಾಣೆಯಿಂದ ಹಿಡಿದು ಹನ್ನೆರಡೇ ಆಣೆಗೆ ಮೂರಾರು ಪುಟಗಳವರೆಗೂ ಮಾರಲಿದ್ದ ಎಲ್ಲ ಪತ್ರಿಕೆಗಳನ್ನು ತಿಂಮನಿಗೆ ತೋರಿಸಿದ ಏಜಂಟ. ಎಲ್ಲವೂ ಸ್ವಂತ ಪ್ರೆಸ್ಸಿನಲ್ಲಿ ಸ್ವತಂತ್ರವಾಗಿ ಅಚ್ಚಾದ ಉಜ್ವಲ ಬಡಪತ್ರಿಕೆಗಳೇ !

ಒಳ ಒಳಗೇ ನಗುತ್ತ ತಿಂಮ ಕೇಳಿದ, "ತಿಂಮನ ತಲೆ ಇದೆ ಏನೋ ಏಜಂಟ ? " ಎಂದು.

" ತಕ್ಕೊಳ್ಳಿ ಸ್ವಾಮೀ. ನಿಮಗೆ ಅನುಕೂಲವಾದಾಗ ಹಣ ಕೊಡಿರಿ" ಎಂದವನೇ ಕಾರಿನಲ್ಲಿಯೇ ತುಂಬಿರಿಸಿದ.

" ಬೆಲೆ ಎಷ್ಟು ? "

" ಬಹಳ ಸ್ವಲ್ಪ-ಅಲ್ಪಾ ಸ್ವಲ್ಪ ಬಹಳ ಸ್ವಾಮಿ, ಒಂದೇ ಒಂದು ರೂಪಾಯಿ " ಏಜಂಟ ಗಂಟೇಬಿದ್ದ

" ಬೇಡ ಬೇಡೋ. ಬೆಲೆ ಹೆಚ್ಚಾಯಿತು."

ತಿಂಮನ ಕಾರು ಟುರ್ ಎಂದಿತು. ಹಟವಾದಿ ಏಜಂಟ ಹಿಂದೆಯೇ ಓಡಿದ. ಮುಂದಿನ ಚಕ್ರಕ್ಕೆ ಅಡ್ಡವಾಗಿ ಸತ್ಯಾಗ್ರಹವನ್ನೇ ಹೂಡಿದ.

" ನಿನ್ನದೇನು ಕಾಟವೋ, ನನಗೆ ಬೇಕಿಲ್ಲ ತಿಂಮನ ತಲೆ " ಮುಸಿ ನಗುತ್ತ ತಿಂಮ ಹೇಳಿದ.

" ತಾವಾದರೂ ಅದನ್ನು ಒಯ್ಯಲೇ ಬೇಕು ಸ್ವಾಮಿ, ಕಾಸಿನ ಒಂದು ಪತ್ರಿಕೆಯನ್ನು ಕೊಳ್ಳಿ ಸ್ವಾಮಿ, ಸಾಕು. ಒಂದು ರೂಪಾಯಿ ಬೆಲೆಯ ಈ ತಿಂಮನ ತಲೆಯ ಮೂರು ಪ್ರತಿಗಳನ್ನು ಪುಕ್ಕಟೆ ಕೊಡುತ್ತೇನೆ. "

# ನೇಕಾರ ಗೋಳು

‘ಹತ್ತಿಗೊಂದು ಕಾಲವಾದರೆ ನೇಸೆಗೆ ಅನುಗಾಲ. ಅಂತೂ ಇಂತೂ ಮಗನಿಗೆ ಇಲ್ಲ ಉಳಿಗಾಲ’ ಎಂಬಂತಾಯಿತು ತಿಂಮನ ಗತಿ. ಹಿಂದಣ ಕರೆಯುವ ವಾಡಿಕೆಯನ್ನು ತಪ್ಪಿಸಿ ಊರ ಮುಖಂಡರೇ ಹಿಡಿದಿದ್ದರು ಭಾಷಣದ ಕಂಟ್ರಾಕ್ಟು. ಹೊರಗಿನಿಂದ ಬಂದ ಮಂತ್ರಿಗಳು ಊರವರನ್ನು ಕೂಡಿಸಿಕೊಂಡು ಊರಿನ ‘ಸಸ್ಯದ ಪರಿಸ್ಥಿತಿ’ಯ ಬಗ್ಗೆ ತಿಳಿಸಿ ಹೇಳಿದರು. ಪುರಜನರೂ ಎಷ್ಟೋ ಹಿತ ಮಂತ್ರಿಗಳಿಗೆ ವಿಸ್ಮಯ ವಿಷಯಗಳನ್ನು ಪರಿಚಯ ಮಾಡಿಕೊಟ್ಟರು. ‘ಇದೇನೋ ತಿಂಮಾ, ಮುದುಪ್ಪ ತಿಂದ್ದು ?’ ಎಂದಾರೋ ಕೇಳಿದಾಗ ‘ಇಷ್ಟೇ ಸರಿ ಸ್ವಾಮಿ. ಕೆಂಪು ಅಕ್ಕಿ ಬಿಳಿ ಗೋದಿ ತಿಂದರೆ ಆಗುವುದೇ ಹೀಗೆ’ ಎಂದು ಉತ್ತರಿಸಿ ತಿಂಮ ಗಳ ಗಳ ನಕ್ಕ. ಮೂರ್ಖ ಮುಖಂಡರು ಊರ ಉದ್ದಕ್ಕೂ ಚೆಲ್ಲಿದ ಭಾಷಣಗಳನ್ನು ಜನರಿಗೆ ಹೇಗೆ ತಿಳಿಸಬೇಕೆಂಬುದೇ ದೊಡ್ಡ ಯೋಚನೆಯಾಯಿತು ತಿಂಮನಿಗೆ. ಹಾಗೆಯೇ ತಿಂದರಂತೂ ಅಜೀರ್ಣ ರೋಗ ಗ್ಯಾರಂಟಿ. ಬೇಯಿಸಿ ತಿನ್ನಲು ಕಟ್ಟಿಗೆ ಇಲ್ಲ. ಕರಿದು ತಿನ್ನಲು ಡಾಲ್ಡಾ ಇದೆ—ಆದರೂ ಕಂಣು ಕೆಡುವ ಅಂಜಿಕೆ ಇದೆ. ಈಗಾಗಲೆ ಸಾಕಷ್ಟು ಕುರುಡಾದವರಿಗೆ ಈ ಸಲಹೆ ಬೇಡ ಎಂದು ಸುಮ್ಮನಾದ. ಇದ್ದಕಿದ್ದಂತೆ ತಿಂಮನಿಗೇ ಹಿಡಿಯಿತು ಒಂದು ಬಾರಿ ಭಾಷಣದ ಹುಚ್ಚು.

ಪ್ಲೇಗು, ಕಾಲರಾ, ಬರಗಾಲ ಬಂದೇ ಬರಬೇಕು ಊರಿಂದ ಮೇಲೆ. ತಿಂಮನ ಊರಿನ ಪಾಳಿ ಬಂದಿತು. ಮಂತ್ರಿಗಳು ದಿಗ್ವಿಜಯ ಮಾಡಿದರು— ನೇಕಾರರ ಗೋಳು ಕೇಳುವ ನೆಪದಿಂದ. ನೇಕಾರರೆಂದರೇನು? ದುಡಿದು ತಿನ್ನುವ ಮೂಳೆಗಳು! ಪಾಪ. ಅವೇನು ಬಲ್ಲವು ಭಾಷಣ ಮಾಡುವ ಭಂಡತನವನ್ನು? ಇದೇ ಸಮಯವೆಂದವನೆ ತಿಂಮ ಮುಂದೆ ಬಂದ. ನೇಕಾರರ ಪರವಾಗಿ ಭಾಷಣ ಮಾಡಲು. ತಾನರಿತ ವಿಷಯವೇ ಇಲ್ಲ. ತಾನು ಬಲ್ಲ ಸತ್ಯವೇ ಇಲ್ಲ! ಅಂತೂ ಶುರುವಾಯಿತು (ಮುಂದೆ ಮಾನ್ಯನಾಗಲಿರುವ) ತಿಂಮನ ಭಾಷಣ. ಮಾಮೂಲಿನಂತೆ ಕೆಮ್ಮುವುದು ಕೇಕರಿಸುವುದು. ನೀರು ಕುಡಿಯುವುದು. ಬೆವರು ಒರಸಿಕೊಳ್ಳುವುದು. ಸುತ್ತಲೂ ಸಿಂಹಾವಲೋಕನವನ್ನು ಮಾಡಿ. ಸುಮ್ಮನೆ ಯಾರನ್ನೊ ಕಂಡು ನಮಸ್ಕಾರ ಸ್ವೀಕರಿಸಿದಂತೆ

ಮಾಡಿ. ಕೊನೆಗೊಮ್ಮೆ ಸುದೀರ್ಘವಾಗಿ ಕೆಮ್ಮಿ ಗಂಟಲಿನ ಮೇಲೆ ಕೈ ಮಾಡಿ ಕೊಂಡು ಭಾಷಣವನ್ನು ಬಿಗಿಯುತ್ತಿದ.

“ ಮಾನ್ಯರಾದ ಮಂತ್ರಿಗಳೇ, ಮಂತ್ರಿಗಳಾದ ಕಾರಣ ಮಾನ್ಯರಾದ ವರೇ, ಮತ್ತು ಮಾಮೂಲಾಗಿ ಭಾಷಣ ಕೇಳುವ ನಮ್ಮೂರಿನ ಭಕ್ತ ಬಕರಾದಿಗಳೇ,

ನೀವು ಏನು ತಿಳಿದೀರಿ ನಮ್ಮೂರ ನೇಕಾರ್ರ ಪರಿಸ್ಥಿತಿ ಅಂದ್ರಿ? ಪ್ರತಿಯೊಬ್ಬನೂ ಪುರುಷನೇ ಆಗಲಿ ಪುರುಷಳೇ ಆಗಲಿ-ನಮ್ಮೂರ ನೇಕಾರ್ರ ಪರಿಸ್ಥಿತಿಯನ್ನು ತಿಳಿಯಲೇ ಬೇಕು. ಏಕೆಂದರೆ ತಿಳಿದುಕೊಳ್ಳಲೇ ಬೇಕು. ಇವರ ಸ್ಥಿತಿ ಅಂದ್ರೆ, ಈಗ ಇಷ್ಟು ಹೀಗೆ ಆಗೇದ, ಯಾಕಂತಂತಂದ್ರೆ ಇವರು ಈ ಊರಾಗೆ ಕಮ್ಮಿ ಕಮ್ಮಿ ಅಂದ್ರೆ ಎರಡು ಸಾವಿರ ಜನರು ಇದ್ದಾರೆ. (ಸಭೆಯಲ್ಲೊಬ್ಬರು ಕೂಗಿದರು—ಎರಡು ಸಾವಿರ ಅಲ್ರೀ, ಇಪ್ಪತ್ತೈದು ಸಾವಿರ ಜನರು ) ಹೂಂ, ಹಂಗೇ ಅನ್ರಿ, ಇಪ್ಪತ್ತೈದು ಸಾವಿರ. ಅದಕೂ ಇದಕೂ ಭಾಳಾ ಫರಕುರೂನೂ—ಅಲ್ಲ ಫರಕೂನೂ—ಇಲ್ಲ. ಇಲ್ಲಿ ಕಡಿಮೀ ಕಡಿಮೀ ಅಂದ್ರೆ ಮೂರು ಸಾವಿರ ಕೈಮಗ್ಗಗಳು ಅವೆ. (ಪುನಃ ಒಂದು ದನಿ—ಮೂರು ಸಾವಿರ ಅಲ್ರಿ, ಎಂಟು ಸಾವಿರ ಅವೆ ) ಹೂಂ, ಹಂಗೇ ಮಾಡ್ರಿ, ಎಂಟು ಸಾವಿರ. ಈ ಎಂಟು ಸಾವಿರ ಮಗ್ಗಗಳಿಗೆ ಅನ್ನ ಇಲ್ಲಾ, ಇಪ್ಪತ್ತೈದು ಸಾವಿರ ಜನರಿಗೆ ನೂಲು ಇಲ್ಲಾ. ಅತೊ ಇಲ್ಲೊ, ಈ ಎಂಟುಸಾವಿರ ಜನರು ಅಂದ್ರೆ ಏನು ತಿಳಿದ್ರಿ? ಆಗದಿ ಕಡಿಮಿ ಕಡಿಮಿ ಅಂದ್ರೆ, ಎಂಟು ಸಾವಿರ ಅಂದ್ರೆ ಕನಿಷ್ಠ ಪಕ್ಷಕ್ಕೆ ಎಂಬತ್ತು ನೂರಾತೂ ಆಗೇ ಆಗ್ತದೆ; ಇದರ ಬಗ್ಗೆ ನಾನು ಖಾತ್ರಿಯಿಂದ ಆಣೆ ಮಾಡಿ ಹೇಳ್ತೇನಿ. ಬೇಕಾದರೆ ನಿಮ್ಮ ಎದಿ ತಟ್ಟಿ ಹೇಳ್ತೇನಿ. ಇಲ್ಲಾ ಅಂದ್ರೆ ನೀವು ತೋರಿಸಿದವರ ಪಾದ ಬಡಿದು ಹೇಳ್ತೇನಿ. ಈ ಎಂಟು ಸಾವಿರ ಅಂದ್ರೆ ನೋಡ್ರಿ. ಒಂದು ಡಿವ್ಹಿಜನ್ನೇ ಆತು. ಅತಿಲ್ಲೊ? ಒಂದು ಡಿವ್ಹಿಜನ್ನು ಅಂದ್ರೆ ನೋಡ್ರೀ, ಕೊರಿಯಾ ಯುದ್ಧಾನೆ ಗೆಲ್ಲೋವಷ್ಟು ಜನ ಆತು. ಅದ್ರು ಟ್ರೂಮನ್ನ ಸಾಹೇಬರೇ—ಕೇಳೀರೋ ಇಲ್ಲೊ, To err is Truman—ಅವರೇ ಹೇಳ್ಯಾರೆ. ಏನು ಹೇಳ್ಯಾರೆ ಅಂತ ತಿಳಿದಿರಿ? ಎಂದೆಂದಿಗೂ ಕೊರಿಯಾ ಪ್ರಕರಣದಾಗೆ ಆಟಂಬಾಂಬು ಹಾಕೋದಿಲ್ಲ ಅಂತ. ಇದರ ಅರ್ಥ ಏನಾತು ಅಂದ್ರಿ,

ಮನುಷ್ಯನ ನೈತಿಕ ಬಲ ಮಹತ್ವದ್ದಿದೆ. ಇವತ್ತು ಟ್ರೂಮನ್ ಹಾಕ ಬಹುದು. ಬಹುದೇನು ? ಹಾಕಿಯೇ ಹಾಕುತ್ತಾನೆ. ಆದರೆ ಸ್ಟಾಲಿನ್ನನೂ ಬಹಳ ಪರಾಕ್ರಮಿ ಇದ್ದಾನೆ. ಅವನಿಗೆ ಏನು ಸಾಧಿಸಲಿಕ್ಕೆ ಸಾಧ್ಯ ಆದೆ ಅಂದ್ರೆ ಎಲ್ಲಾನೂ ಮಾಡ್ತಾನೆ. ಅವನೇನು ತಲೆ ಮಾಡ್ತಾನೆ ಬಿಡ್ರಿ, ನಮ್ಮ ನೆಹ್ರೂನ ಮುಂದೆ. ನೆಹ್ರೂ ಅಂದ್ರೆ ಏನು ತಿಳಿದಿರಿ ? ಸಾಕ್ಷಾತ್ ಶಾಂತಿ ಮೂರ್ತಿ ಇದ್ದಾನವನು. ಅವನಷ್ಟು ದೊಡ್ಡ ಮಹಾತ್ಮನೇ ಇಲ್ರಿ. ಯಾಕಂತಂತಂತಂದ್ರೆ ಅವನು ಬರೇ ಮಾಮೂಲಿ ಮಹಾತ್ಮ ಅಲ್ಲ; ಗಾಂಧೀ ಅವರಕಿಂತ ಒಂದು ಗುದ್ದುಮೇಲ ಹೆಚ್ಚಿಗಿ ಮಹಾತ್ಮನೇ ಇದ್ದಾನೆ. ಯಾಕಂದ್ರೆ ನೋಡ್ರೀ, ಗಾಂಧೀಜಿಯವರು ಶಾಂತಿ ಶಾಂತಿ ಅಂದು ಶಾಂತಿ ಗಾಗಿ ಸತ್ತರು, ಮಡಿದರು, ಮರಣ ಹೊಂದಿದರು, ಪ್ರಾಣಬಿಟ್ಟರು. ಕೀರ್ತಿ ಶೇಷರಾದರು. ಕೈಲಾಸವಾಸಿಗಳಾದರು. ಆದರೆ ನಮ್ಮ ನೆಹ್ರೂರವರು ಶಾಂತಿ ಕಾಲದಲ್ಲಿ ಇದ್ದಾರೆ. ನೆಹ್ರೂ ಅವರ ಮಹತ್ವ ತಿಳೀಲಿಕ್ಕೆ ನಿಮಗೆ ಬ್ಯಾರೆ ಏನೂ ಬ್ಯಾಡ, ಇದೊಂದೇ ಉದಾಹರಣೆ ಸಾಕು. ಈಗ ನಮ್ಮೂರಿಗೆ ಬಂದು ಸಿನೆಮಾಸ್ಟರ ಎದುರಿಗೆ ಏನು ಕೂತಾರಲ್ಲ, ಕಂಬಾ ಮುಚಿಗೊಂಡು, ಗಾದೀ ಮ್ಯಾಲೆ, ಮೂಲಿ ಹಾಕ್ಕೊಂಡು ಮಂತ್ರಿಗಳು ಕೂತಾರಲ್ಲಾ, ಇವರನ್ನ ಸಾಕ್ಷಾತ್ ನೆಹ್ರೂರೇ ಆರಿಸ್ಯಾರೆ. ಅಂದಮ್ಯಾಲೆ ನೆಹ್ರೂ ಎಷ್ಟು ದೊಡ್ಡ ವರು ಅಂಬೋದು ಸ್ಪಷ್ಟ ಆತು. ಇವರಾದರೂ ಏನು ಸಾಮಾನ್ಯರಲ್ಲಾ, ಯಾಕಂದ್ರೆ ನೋಡ್ರಿ, ಇವರನ್ನ ಆ ನೆಹ್ರೂನೇ ಆರಿಸ್ಯಾರೆ ಅಂದಮ್ಯಾಲೆ ಇವರೂನು ಮಹಾತ್ಮರೆ ಅಂದಂತಾತು. ಈ ನಮ್ಮ ಮಂತ್ರಿಗಳನ್ನ ಏನು ಅಂತ ಮಾಡೀರಿ ? ಒಂದು ಸಾವಿರದ ಒಂಬತ್ತು ನೂರ ಮೂವತ್ತೆರಡರಾಗ ಇವರು ಅಂಡರ್ ಗ್ರೌಂಡ್ ಅಂದ್ರೆ ನೆಲದಾಗ ಹೋಗಿದ್ದರು. ( ಮೂವತ್ತೆ ರಡು ಅಲ್ರಿ ನಲವತ್ತೆರಡು ಎಂದೊಬ್ಬ ಹಿ ) ಹೂಂ. ಹಾಗೆ ಮಾಡ್ರಿ, ನಲವತ್ತೆರಡು; ಹತ್ತು ಹೆಚ್ಚು ಹತ್ತು ಕಡಿಮೆ. ಇವರು ನಲವತ್ತೆರಡರಾಗ ಮೀಸಿ ಬೋಳಿಸಿ, ಹೆಂಗಸರ ಸೀರಿ ಉಟ್ಟು, ಕೈಯಾಗ ಮುತ್ತೈದೇರ ಬಳೀ ತೊಟ್ಟು, ಹೊಲದಾಗ ಕಳೇವು ತಗಿತಿದ್ರು ಪೋಲೀಸರ ಕಣ್ಣು ತಪ್ಪಿಸಲಿಕ್ಕೆ. ಆದರೆ ನೋಡ್ರಿ, ಇವರು ಹೆಣ್ಣು ಸೋಗು ಹಾಕಿದ್ದು ಇವರನ್ನ ಕಷ್ಟಕ್ಕೆ ಈಡು ಮಾಡಿತು. ಯಾಕಂದ್ರೆ ಲಫಂಗ ಪೋಲೀಸರು ಇವರ ಹಿಂದೇ ಹತ್ತಿದರು ಸೀರಿ ಕಂಡು. ಇವರು ಬಳೀತೊಟ್ಟು ಸೀರಿ ಉಟ್ಟಿದ್ದು ಏನೂ ವ್ಯರ್ಥ ಆಗ

ಲಿಲ್ಲ ಅನ್ರಿ. ಯಾಕಂತಂದ್ರೆ. ಈಗ ಅವರಿವರು ಏಕೀಕರಣದ ಪ್ರಶ್ನೆ ಬಂದಾಗೆಲ್ಲ ಇವರನ್ನ ಅಂತಾರೆ ' ನೀವೇನು, ಕೈಯಾಗ ಬಳೀ ತೊಟ್ಟೀರೇನು ? ಕೇಂದ್ರದವರನ್ನು ಕೇಳ್ರೀ. ನೀವೇನು ಹೆಂಗಸರೇನು?' ಅಂತ. ಇದರಿಂದ ಈ ಮಹಾನುಭಾವರಿಗೆ ಏನ್ನೂ ಇದು ಆಗೋದಿಲ್ಲ. ಯಾಕಂದ್ರೆ ಆಗ ವೇದ ಹಾಕಿದ್ದು ಈಗ ನಿಜಾನೇ ಆಗ್ಯದೆ ಅನ್ರಿ. ಇವರಿಗೆ ಒಕ್ಕಲತನದ ಬಗ್ಗೆ ಎಷ್ಟು ಆಸ್ಥೆ ಅದೆ ಅನ್ನೋದು ಆಗಲೆ ಸಾಬೀತು ಆತು, ಇವರು ನಲವತ್ತೆರಡರಾಗೆ ಹೊಲದಾಗೆ ಕರೀವು ತಗೀತಿದ್ದಾಗೆ ತಿಳೀತು ಅನ್ರಿ. ಈಗಿನ ಜನಾನನ್ರಿ. ಬರೀ ಟೀಕಾ ಮಾಡ್ತಾರೆ, ಅವರಿಗೇನು ತಿಳಿತಿದೆ? ನಮ್ಮ ದೇಶದಾಗೆ ಒಕ್ಕಲತನ ಬೆಳಿಬೇಕು, ಗಿಡದಾಗೆ ರೊಟ್ಟಿಗಳೇ ಬೆಳಿಬೇಕು. ಬಳ್ಳಿಗುಳಾಗೇ ಚಟ್ನಿ ಚಿಗುರಬೇಕು. ಮರಗಳಾಗೆ ಮುದ್ದಿಕಾಯಿ ಬಿಡಬೇಕು. ಬಾವಿಗುಳಾಗೆ ಅಮ್ರ್ತಾನೆ ಸಿಗಬೇಕು ಅಂತ ಕೂಡಾ ಬಯಸೋ ಮಹಾತ್ಮರು ಇವರು. ಈ ಮಾನ್ಯ ಮಂತ್ರಿಗಳು ಅಂದರೆ, ದುರ್ದೈವದಿಂದ ನಿಮ್ಮ ದೇಶ-ಅಲ್ಲಾ ನಮ್ಮ ದೇಶ–ಬಹಳ ಹಿಂದೆ ಉಳದಾದೆ ಒಕ್ಕಲತನದಾಗೆ. ರಸಿಯಾದಾಗೆ ನೋಡ್ರಿ, ವಿಮಾನದಾಗಿಂದ ಗೋದಿ ಬಿತ್ತುತಾರೆ. ನಾವೂ ಹೀಂಗೇ ಮಾಡಬೇಕು. ಅಮೇರಿಕದೊಳಗೆ ಸಿಮೆಂಟು ಟಾರು ರಸ್ತೇ ಮ್ಯಾಲೆ ಪಲ್ಲೆಕಾಯಿ ಬೆಳಿತಾರೆ. ನಮ್ಮ ಜನರು ಬಹಳ ಥಡ್ಡರು ಇದ್ದಾರೆ. ಮದ್ರಾಸಿನಾಗೆ ಕಾಯಿಪಲ್ಲೆ ನೆಲಕ್ಕೆ ಹಾಕಿ ಕಚಪಚ ತುಳೀತಾರಂತೆ ಕಾಲಿಂದ. ಅದಕೇ ನೋಡ್ರಿ ನೆಲನಡುಗಿ ಅಸ್ಸಾಂದೊಳಗೆ ಭೂಕಂಪ ಆಗಿತ್ತು. ಆದಕಾರಣ ಜನರು ಸುಮ್ಮನೆ ಇರಬಾರದು. ಯಾರದೂ ನಿರ್ದಾಕ್ಷಿಣ್ಯ ಇಲ್ಲದೆ ಅನಬೇಕು, ನೆಹ್ರೂ ಆಗಲಿ ಯಾರೇ ಆಗಲಿ, ಏನು ನೆಹ್ರೂ ಬಿಡಿರಿ, ನನಗೇನು ಅವರು ಅಷ್ಟು ಪಾಸ್ ಅನಸಲಿಲ್ಲ. ಯಾಕಂದ್ರೆ ನೋಡ್ರಿ, ಅದನ್ನೆಲ್ಲಾ ಈಗ ಹೇಳಬಾರದು. ಯಾವ ನೆಹ್ರೂ, ಯಾವ ಗಾಂಧೀರಿ ? ಅಂತೂ ಕಾಲ ಬಹಳ ಕೆಟ್ಟ್ಯಾದೆ. ಆದಕಾರಣ ನೀವೆಲ್ಲ ನೇಕಾರ್ರಿಗೆ ಸಹಾಯ ಮಾಡಬೇಕು."

ತಿಂಮ್ಮ ಭಾಷಣ ಮುಗಿಸಿ ಕುಳಿತ. ಅದೇಕೋ ಯಾರೂ ಕೈತಟ್ಟಲಿಲ್ಲ. ತಲೆ ಎತ್ತಿನೋಡಿದ, ಯಾರೂ ಇಲ್ಲ ಸಭೆಯಲ್ಲಿ. ತಾನೇ ಕೈತಟ್ಟಿ ಮನೆಯ ಹಾದಿಹಿಡಿದ.

ಲಿಲ್ಲ ಅನ್ರಿ. ಯಾಕಂತಂದ್ರೆ, ಈಗ ಇವರಿವರು ಏಕೀಕರಣದ ಪ್ರಶ್ನೆ ಬಂದಾಗೆಲ್ಲ ಇವರನ್ನ ಅಂತಾರೆ 'ನೀವೇನು ಕೈಯಾಗ ಬಳೀ ತೊಟ್ಟೀರೇನು ? ಕೇಂದ್ರದವರನ್ನು ಕೇಳ್ರೀ. ನೀವೇನು ಹೆಂಗಸರೇನು?' ಅಂತ. ಇದರಿಂದ ಈ ಮಹಾನುಭಾವರಿಗೆ ಏನೂ ಇದು ಆಗೋದಿಲ್ಲ. ಯಾಕಂದ್ರೆ ಆಗ ವೇಷ ಹಾಕಿದ್ರು ಈಗ ನಿಜಾನೇ ಆಗ್ಯದೆ ಅನ್ರಿ. ಇವರಿಗೆ ಒಕ್ಕಲತನದ ಬಗ್ಗೆ ಎಷ್ಟು ಆಸ್ಥೆ ಅದೆ ಅನ್ನೋದು ಆಗಲೆ ಸಾಬೀತು ಆತು, ಇವರು ನಲವತ್ತೆರಡರಾಗೆ ಹೊಲದಾಗೆ ಕಕ್ಕೇವು ತಗೀತಿದ್ದಾಗೆ ತಿಳೀತು ಅನ್ರಿ. ಈಗಿನ ಜನಾನನ್ರಿ. ಬರೀ ಟೀಕಾ ಮಾಡ್ತಾರೆ, ಅವರಿಗೇನು ತಿಳಿತದೆ? ನಮ್ಮ ದೇಶದಾಗೆ ಒಕ್ಕಲತನ ಬೆಳೀಬೇಕು, ಗಿಡದಾಗೆ ರೊಟ್ಟಿಗಳೇ ಬೆಳಿಬೇಕು. ಬಳ್ಳಿಗುಳಾಗೇ ಚಿಟ್ಟೆ ಚಿಗುಂಬೇಕು. ಮರಗುಳಾಗೆ ಮುದ್ದಿಕಾಯಿ ಬಿಡಬೇಕು. ಬಾವಿಗುಳಾಗೆ ಅಮ್ರಾನೆ ಸಿಗಬೇಕು ಅಂತ ಕೂಡಾ ಬಯಸೋ ಮಹಾತ್ಮರು ಇವರು. ಈ ಮಾನ್ಯ ಮಂತ್ರಿಗಳು ಅಂದರೆ, ದುರ್ದೈವದಿಂದ ನಿಮ್ಮ ದೇಶ-ಅಲ್ಲಾ ನಮ್ಮ ದೇಶ–ಬಹಳ ಹಿಂದೆ ಉಳದಾದೆ ಒಕ್ಕಲತನದಾಗೆ. ರಸಿಯಾದಾಗೆ ನೋಡ್ರಿ, ವಿಮಾನದಾಗಿಂದ ಗೋದಿ ಬಿತ್ತುತಾರೆ. ನಾವೂ ಹೀಂಗೇ ಮಾಡಬೇಕು. ಅಮೇರಿಕದೊಳಗೆ ಸಿಮೆಂಟು ಟಾರು ರಸ್ತೇ ಮ್ಯಾಲೆ ಪಲ್ಲೆಕಾಯಿ ಬೆಳಿತಾರೆ. ನಮ್ಮ ಜನರು ಬಹಳ ಘಡ್ಡರು ಇದ್ದಾರೆ. ಮದ್ರಾಸಿನಾಗೆ ಕಾಯಿಪಲ್ಲೆ ನೆಲಕ್ಕೆ ಹಾಕಿ ಕಚಪಚ ತುಳೀತಾರಂತೆ ಕಾಲಿಂದ. ಅದಕೇ ನೋಡ್ರಿ ನೆಲನಡುಗಿ ಅಸ್ಸಾಂದೊಳಗೆ ಭೂಕಂಪ ಆಗಿತ್ತು. ಆದಕಾರಣ ಜನರು ಸುಮ್ಮನೆ ಇರಬಾರದು. ಯಾರದೂ ನಿರ್ದಾಕ್ಷಿಣ್ಯ ಇಲ್ಲದೆ ಅನಬೇಕು, ನೆಹ್ರೂ ಆಗಲಿ ಯಾರೇ ಆಗಲಿ, ಏನು ನೆಹ್ರೂ ಬಿಡಿರಿ, ನನಗೇನು ಅವರು ಅಷ್ಟು ಪಾಸ್ ಅನಸಲಿಲ್ಲ. ಯಾಕಾಂದ್ರೆ ನೋಡ್ರಿ, ಅದನ್ನೆಲ್ಲಾ ಈಗ ಹೇಳಬಾರದು. ಯಾವ ನೆಹ್ರೂ, ಯಾವ ಗಾಂಧೀರಿ? ಅಂತೂ ಕಾಲ ಬಹಳ ಕೆಟ್ಟ್ಯಾದೆ. ಆದಕಾರಣ ನೀವೆಲ್ಲ ನೇಕಾರ್ರಿಗೆ ಸಹಾಯ ಮಾಡಬೇಕು."

ತಿಮ್ಮ ಭಾಷಣ ಮುಗಿಸಿ ಕುಳಿತ. ಆದೇಕೋ ಯಾರೂ ಕೈತಟ್ಟಲಿಲ್ಲ. ತಲೆ ಎತ್ತಿ ನೋಡಿದ, ಯಾರೂ ಇಲ್ಲ ಸಭೆಯಲ್ಲಿ. ತಾನೇ ಕೈತಟ್ಟಿ ಮನೆಯ ಹಾದಿಹಿಡಿದ.